# ಎಂ. ಬಿ. ಲೋಹಾರ
# M. B. LOHAR


**ಡಾ. ಶಿವಾನಂದ ಎಚ್. ಬಂಟನೂರ**

**Dr. Shivananda H. Bantanoor**





**ಕರ್ನಾಟಕ ಲಲಿತಕಲಾ ಅಕಾಡೆಮಿ**

ಕನ್ನಡ ಭವನ, ಜೆ.ಸಿ.ರಸ್ತೆ, ಬೆಂಗಳೂರು–560 002

ದೂರವಾಣಿ : 080– 22480297

E-mail : kla.karnataka@gmail.com

**M.B. Lohar** A Monograph written by **Dr. Shivananda H. Bantanoor**, Published by **K.Sudindhra** Registrar, Karnataka Lalithakala Academy, Kannada Bhavana, J.C.Road,Bengaluru-560 002, Ph:080-22480297 E-mail : kla.karnataka@gmail.com

| | | |
|---|---|---|
| First Edition | : | 2012 |
| Pages | : | xii+ 36+ 20 = 68 |
| Copies | : | 1000 |
| Price | : | Rs. 80/- |
| ಹಕ್ಕುಗಳು | : | ಕಾಯ್ದಿರಿಸಿದೆ |
| ಮುದ್ರಣ | : | ೨೦೧೨ |
| ಪುಟಗಳು | : | Xii+೩೬+೨೦ = ೬೮ |
| ಪ್ರತಿಗಳು | : | ೧೦೦೦ |
| ಬೆಲೆ | : | ೮೦/– |
| ಆಂಗ್ಲ ಅನುವಾದ | : | ಎಚ್. ಎ. ಅನಿಲ್‌ಕುಮಾರ್ |
| ಮುಖಪುಟ ಚಿತ್ರ | : | ಎಂ.ಬಿ. ಲೋಹಾರ |

ಪ್ರಕಾಶಕರು
**ಕೆ. ಸುಧೀಂದ್ರ**
ರಿಜಿಸ್ಟ್ರಾರ್, ಕರ್ನಾಟಕ ಲಲಿತಕಲಾ ಅಕಾಡೆಮಿ
ಕನ್ನಡ ಭವನ, ಜೆ.ಸಿ.ರಸ್ತೆ
ಬೆಂಗಳೂರು–560 002
ದೂರವಾಣಿ : 080– 22480297
E-mail : kla.karnataka@gmail.com

ಮುದ್ರಕರು
**ರಶ್ಮಿ ಪ್ರಿಂಟರ್ಸ್**
ನಂ.12ಬಿ, ಮೊದಲನೇ ಅಡ್ಡರಸ್ತೆ
ಕಲಾಸಿಪಾಳ್ಯ ಹೊಸಬಡಾವಣೆ
ಬೆಂಗಳೂರು–560 002
ದೂ : 22115815, 99019 16581



# ಅಧ್ಯಕ್ಷರ ನುಡಿ

ಕರ್ನಾಟಕವು ಇಂದು ಸಮಕಾಲೀನ ಹಾಗೂ ಸಾಂಪ್ರದಾಯಿಕ ಕಲೆಗಳಲ್ಲಿ ದೇಶ ವಿದೇಶಗಳ ಗಮನವನ್ನು ಸೆಳೆದಿರುವುದು ಸರ್ವವಿದಿತ. ಇಲ್ಲಿನ ಕಲಾವಿದರು ತಮ್ಮ ನಾವೀನ್ಯದ ಕೃತಿಗಳ ಮೂಲಕ ಸೀಮೋಲ್ಲಂಘನ ಮಾಡಿ ಕರ್ನಾಟಕದ ಹೆಸರು ದೇಶ ವಿದೇಶಗಳಲ್ಲಿ ಕೇಳಿ ಬರುವಂತೆ ಮಾಡಿದ್ದಾರೆ. ಹಾಗಿದ್ದರೂ ಆ ಚಟುವಟಿಕೆಗಳಿಗೆ ಹೋಲಿಸಿದರೆ ನಮ್ಮಲ್ಲಿ ಕಲಾಸಾಹಿತ್ಯದ ರಚನೆ ಅಷ್ಟಾಗಿ ಆಗಿಲ್ಲವೆಂದರೆ ತಪ್ಪಾಗಲಾರದು. ಈ ಕೊರತೆಯನ್ನು ಸ್ವಲ್ಪವಾದರೂ ನೀಗಿಸುವ ದಿಸೆಯಲ್ಲಿ ಕರ್ನಾಟಕ ಲಲಿತ ಕಲಾ ಅಕಾಡೆಮಿಯು ಕೆಲವೊಂದು ಪ್ರಕಟಣೆಗಳನ್ನು ತರುತ್ತಿದೆ. ನಮ್ಮ ಕಲಾವಿದರು ಹಾಗೂ ಅವರ ಕೃತಿಗಳನ್ನು ಪರಿಚಯಿಸುವ ಮಾಲೆಯು ಅದರಲ್ಲೊಂದು.

ಈ ಮಾಲೆಯಲ್ಲಿ ಈಗಾಗಲೇ ಹಲವಾರು ಹೊತ್ತಿಗೆಗಳು ಬಂದಿದ್ದು, ಇದೀಗ ನಮ್ಮ ಕಲ್ಯಾಣದ ನಾಡು ಎಂದೇ ಪ್ರಖ್ಯಾತವಾದ ಗುಲ್ಬರ್ಗದ ನನ್ನ ಹಿರಿಯ ಮಿತ್ರರಾಗಿದ್ದ ಎಂ.ಬಿ.ಲೋಹಾರರನ್ನು ಕುರಿತ ಪುಸ್ತಕ ಇದೀಗ ನಿಮ್ಮ ಮುಂದಿದೆ. ನನ್ನ ಇನ್ನೋರ್ವ ಮಿತ್ರರೂ, ದೃಶ್ಯಕಲಾ ಸಾಹಿತ್ಯದ ಬಗ್ಗೆ ತೀವ್ರ ಕಳಕಳಿಯುಳ್ಳ ಡಾ. ಶಿವಾನಂದ ಬಂಟನೂರರು ಈ ಪುಸ್ತಕವನ್ನು ಬರೆದಿದ್ದಾರೆ. ದಿವಂಗತ ಲೋಹಾರರ ನಿಕಟ ಪರಿಚಯವಿದ್ದ ಅವರು ಲೋಹಾರರ ಬದುಕು ಮತ್ತು ಸಾಧನೆಯನ್ನು ತಿಳಿಸಿ ಕೊಡುವ ಪ್ರಯತ್ನ ಮಾಡಿದ್ದಾರೆ. ಈ ಪುಸ್ತಕವು ನಿಜಕ್ಕೂ ಸಿದ್ಧವಾದದ್ದು ಹಿಂದಿನ ಅಕಾಡೆಮಿಯ ಅಧ್ಯಕ್ಷರಾಗಿದ್ದ ಶ್ರೀ ಜೆ.ಎಸ್. ಖಂಡೇರಾವ್ ಅವರ ಅವಧಿಯಲ್ಲಿ. ಇದೀಗ ನನ್ನ ಅಧ್ಯಕ್ಷತೆಯ ಅವಧಿಯಲ್ಲಿ ಇದು ಮುದ್ರಣವಾಗಿ ಬಿಡುಗಡೆಯಾಗುತ್ತಿರುವುದು ನಿಜಕ್ಕೂ ನನಗೆ ಸಂತಸವನ್ನು ತಂದಿದೆ. ಇದಕ್ಕೆ ಕಾರಣರಾದ ಡಾ. ಬಂಟನೂರು ಮತ್ತು ಶ್ರೀ ಖಂಡೇರಾವ್ ಅವರಿಗೆ ನಾನು ಕೃತಜ್ಞನಾಗಿದ್ದೇನೆ. ನಮ್ಮ ಓದುಗರು ಎಂದಿನಂತೆ ಈ ಪುಸ್ತಕವನ್ನೂ ಆದರದಿಂದ ಸ್ವೀಕರಿಸುತ್ತಾರೆಂಬ ನಂಬಿಕೆ ನನಗಿದೆ.

**– ಚಿ. ಸು. ಕೃಷ್ಣ ಸೆಟ್ಟಿ**



# ನಿಮ್ಮೊಂದಿಗೆ

ಎಂ.ಬಿ. ಲೋಹಾರ ಅವರ ಕುರಿತು ಪುಸ್ತಕ ಬರೆಯುವ ಅವಕಾಶ ನನಗೆ ದೊರೆತುದು ಒಂದು ಸುಯೋಗವೆನ್ನಬೇಕು. ಅವರು ಸೇವೆ ಸಲ್ಲಿಸುತ್ತಿದ್ದ ದಿ ಐಡಿಯಲ್ ಫೈನ್ ಆರ್ಟ್ ಸಂಸ್ಥೆಯಲ್ಲಿ (೧೯೯೮-೨೦೦೧) ಸಂದರ್ಶಕ ಅಧ್ಯಾಪಕನಾಗಿ ಮೂರು ವರ್ಷಕಾಲ ಸೇವೆ ಸಲ್ಲಿಸುವ ಅವಕಾಶವೊಂದು ನನಗೆ ದೊರಕಿದ್ದಿತು. ಈ ಅವಕಾಶವನ್ನು ಆ ಸಂಸ್ಥೆಯ ಕಾರ್ಯದರ್ಶಿಗಳಾದ ಪ್ರೊ. ವಿ.ಜಿ. ಅಂದಾನಿಯವರು ಕರುಣಿಸಿದ್ದರು. ಈ ಹಂತದಲ್ಲಿ ಲೋಹಾರ್ ಅವರ ಪರಿಚಯವಾಗಿ ಅವರೊಂದಿಗಿನ ನನ್ನ ಒಡನಾಟ ಗಾಢವಾಯಿತು. ನನಗೆ ಬಿಡುವಿದ್ದಾಗ ಅವರ ಬಳಿ ಹೋಗಿ ಕುಳಿತುಕೊಳ್ಳುತ್ತಿದ್ದೆ. ಪ್ರಾಚಾರ್ಯ ಹುದ್ದೆಯಲ್ಲಿದ್ದ ಅವರು ತಮ್ಮ ಕಲಾ ಜೀವನದ ಸಿಹಿಕಹಿ ಅನುಭವಗಳನ್ನು ಮುಚ್ಚು ಮರೆಯಿಲ್ಲದೆ ನನ್ನೊಂದಿಗೆ ಹಂಚಿಕೊಳ್ಳುತ್ತಿದ್ದರು. ಮಾತ್ರವಲ್ಲ ಸಮಕಾಲೀನ ಕಲಾ ಸನ್ನಿವೇಶದ ಕುರಿತು ಹಲವಾರು ವಿಷಯ, ಸಂಗತಿಗಳನ್ನು ಚರ್ಚಿಸುತ್ತಿದ್ದರು.

ನನ್ನಲ್ಲಿನ ಆಸಕ್ತಿಗಳ ಕುರಿತು ಕುತೂಹಲ ತಳೆದಿದ್ದ ಅವರು ನನ್ನ ಶಿಲ್ಪಕಲಾಕೃತಿಗಳನ್ನು ಬಹುವಾಗಿ ಮೆಚ್ಚಿಕೊಂಡಿದ್ದರು. ಅಂತೆಯೇ ನನ್ನಿಂದ ಪುಟ್ಟ ಶಿಲ್ಪವೊಂದನ್ನು ಕೇಳಿ ಪಡೆದು ತಮ್ಮ ಕಛೇರಿಯಲ್ಲಿ ಇರಿಸಿಕೊಂಡಿದ್ದರು. ಒಂದು ಸಲ ನನ್ನನ್ನು ತಮ್ಮ ಮನೆಗೂ ಆಹ್ವಾನಿಸಿ ತಮ್ಮೆಲ್ಲ ರೇಖಾಚಿತ್ರ, ವರ್ಣಚಿತ್ರ ಕಲಾಕೃತಿಗಳನ್ನು ತೋರಿಸಿ ವಿವರಿಸಿದ್ದರು. ಹೀಗಾಗಿ ಲೋಹಾರ್ ಮತ್ತು ಅವರ ಕಲೆಯ ಬಗ್ಗೆ ನನ್ನಲ್ಲಿ ವಿಶೇಷ ಪ್ರೀತಿ, ಒಲವು ಮನೆಮಾಡಿದ್ದಿತು.

ಗುಲಬರ್ಗಾದಲ್ಲಿನ ಆ ದಿನಗಳಲ್ಲಿ ನಾನು ನಾಲ್ಕು ಕಿ.ಮೀ ಅಂತರದಲ್ಲಿನ ನನ್ನ ಬಾಡಿಗೆ ರೂಮಿನಿಂದ ಕಾಲೇಜಿಗೆ ನಡೆದುಕೊಂಡು, ಕೆಲವೊಮ್ಮೆ ಸೈಕಲ್ ತುಳಿದುಕೊಂಡು ಬಂದು ಪಾಠ ಮಾಡುತ್ತಿದ್ದೆ. ನನ್ನ ಬಳಿ ಸ್ವಯಂಚಾಲಿತ ವಾಹನವಿರಲಿಲ್ಲ. ಸ್ವಾಭಿಮಾನದ ಬದುಕು ಬೇರೆ. ಇದನ್ನು ಗಮನಿಸಿದ್ದ ಲೋಹಾರ್ ಅವರು 'ಸರ್ ಗುಲಬರ್ಗಾದಲ್ಲಿ ಬಿಸಿಲು ಜಾಸ್ತಿ ನೀವು ನಡೆದುಕೊಂಡು ಇಲ್ಲವೆ ಸೈಕಲ್ ತುಳಿದುಕೊಂಡು ಬರಬೇಡಿ, ಬಸ್ಸಿಗೆ ಬನ್ನಿ. ನಿಮಗೊಂದು ಬಸ್‌ಪಾಸ್ ಮಾಡಿಸಿಕೊಡುತ್ತೇನೆ' ಎಂದು ಹೇಳಿ ತಮ್ಮ ವಿದ್ಯಾರ್ಥಿಯೋರ್ವನ ಹೆಸರಿನಲ್ಲಿ ನನ್ನದೊಂದು ಭಾವಚಿತ್ರ

ಅಂಟಿಸಿ ಪಾಸ್ ಮಾಡಿಸಿ ಕೊಟ್ಟಿದ್ದರು. ಹೀಗೆ ಮತ್ತೊಬ್ಬರ ಅಸಹಾಯಕತೆಯನ್ನು ಅರ್ಥಮಾಡಿಕೊಳ್ಳುವ, ಸಹಾಯ ಮಾಡುವ ಉದಾರ ಗುಣ ಲೋಹಾರ ಅವರಲ್ಲಿದ್ದಿತು ಎಂಬುದಕ್ಕೆ ಈ ನನ್ನ ಅನುಭವವು ಒಂದು ದೃಷ್ಟಾಂತವಾಗಿದೆ. ಅವರದು ಮುಗ್ಧ ಮನಸ್ಸು, ಸರಳ, ಶಿಸ್ತಿನ ನಿರಾಡಂಬರ ಬದುಕು. ಕಲಾ ವಿಮರ್ಶೆಯ ಚೌಕಟ್ಟಿನೊಳಗೆ ಅವರು ಮತ್ತು ಅವರ ಕಲಾಕೃತಿಗಳ ಸ್ಥಾನ ಏನೇ ಇರಲಿ ಅವರು ಒಬ್ಬ ಉತ್ತಮ ಶಿಕ್ಷಕ ಮತ್ತು ಕಲಾವಿದರಾಗಿದ್ದರು ಎಂಬುದರಲ್ಲಿ  ಎರಡು ಮಾತಿಲ್ಲ. ಅವರು ಬದುಕಿನುದ್ದಕ್ಕೂ ನಿರಂತರವಾಗಿ ಚಿತ್ರಿಸಿದರು, ಚಿತ್ರಿಸುವವರನ್ನು ಪ್ರೀತಿಸಿದರು ಮತ್ತು ಪ್ರೋತ್ಸಾಹಿಸಿದರು.

ಹಿಂದುಳಿದ ಪ್ರದೇಶದಲ್ಲಿ ಹುಟ್ಟಿ, ಬೆಳೆದು ಇದೇ ಪ್ರದೇಶದಲ್ಲಿ ಸಾಧನೆ ಮಾಡಿ ಈ ನೆಲಕ್ಕೆ ಅಂತರರಾಷ್ಟ್ರೀಯ ಮಹತ್ವ ತಂದುಕೊಟ್ಟು ಅಮರರಾದವರ ಸಾಲಿನಲ್ಲಿ ಇಂದು ಲೋಹಾರ ಅವರೂ ಸೇರಿ ಹೋಗಿದ್ದಾರೆ. ಇಂತಹ ಕಲಾವಿದನ ಕುರಿತು ಬರೆಯಲು ಅಕಾಡೆಮಿಯಿಂದ ಆಹ್ವಾನ ಬಂದಾಗ ನಾನು ಸಂತೋಷದಿಂದ ಒಪ್ಪಿಕೊಂಡು ಬರೆದಿರುವೆನು. ಈ ಪುಸ್ತಕ ಬರೆಯಲು ಲೋಹಾರ್ ಅವರ ಕುಟುಂಬದವರು ಸಹಕರಿಸಿದ್ದಾರೆ. ಮುಖ್ಯವಾಗಿ ಅವರ ಹಿರಿಯ ಮಗ ಸಾಯಿನಾಥ ಲೋಹಾರ ಸಾಕಷ್ಟು ಮಾಹಿತಿ ನೀಡಿದ್ದಾರೆ. ಅಂದವಾದ ರೂಪು ಪಡೆಯಲು ಅಕಾಡೆಮಿಯ ಅಧ್ಯಕ್ಷರಾದ ಪ್ರೊ. ಜೆ.ಎಸ್.ಖಂಡೇರಾವ್ ಮತ್ತು ಎಸ್. ಎಂ. ಜಂಬುಕೇಶ್ವರ, ಜಿ.ಎಸ್.ಭೂಸಗೊಂಡ ಮೊದಲಾದ ಸದಸ್ಯರು ಕಾಳಜಿ ವಹಿಸಿದ್ದಾರೆ. ಇವರೆಲ್ಲರಿಗೂ ನನ್ನ ವಂದನೆಗಳು.

– ಡಾ. ಶಿವಾನಂದ ಎಚ್. ಬಂಟನೂರ

# Life and Works of M. B. LOHAR

**—Dr. Shivananda H. Bantanoor**

**(Translation: H.A.Anil Kumar)**

**With you…**

It is a privilege to have got this opportunity to write a book about artist M.B.Lohar. I had the opportunity to teach as a visiting faculty for three years (1998-2001) in the Ideal Fine Art Society wherein he served as an art tutor. The Secretary of this Institution Prof.V.G.Andani had facilitated me with this opportunity. During those days I came to interact with Lohar in a meaningful way. I would always visit him whenever I had free time. As a Principal of the Institution, he shared with me his experiences, both bitter and sweet. This he did without any pretentions. Alongside he would draw my attention to a whole lot of happenings in the contemporary art scenes.

He was curious towards my artistic production and specifically towards my sculptures. As a result he requested for a small sculpture of mine and had displayed it in his office for a long time. On another occasion he invited me to his home, showed me his artworks and discussed with me like a peer. Hence I grew up to develop a specific regard towards his art and his personality as an artist.

During those days I used to walk or go cycling to the four kilometer-away art school, to teach, in Gulbarga. I did not have a motor vehicle

of my own neither did my pride permit me to depend upon others. Lohar took note of it once and told me not to walk or cycle in the scotching heat of Gulbarga, but instead asked me to "travel by bus". Through one of his student he got a bus pass in my name, after attesting a photo of mine. He had this extra-yard-attitude to observe the shortcomings of those around him and would rectify the same as much as he could. His personality was simple, modest and disciplined. Whatever may be the fate of critique regarding his works, he was an efficient art teacher and an artist. He painted throughout his life, was affectionate and encouraging towards those who painted.

Lohar is one of those few artists who was born in a marginalized place, achieved artistic endeavor in the very same place and brought in an international ambience to this place. Due to this reason, I feel privileged to write about him for the Lalitha Kala Academy. His family has extended full cooperation towards this. His elder son Sainath Lohar has given sufficient information. The Chairman of L.K.A, Prof.J.S.Khanderao, Members like S.M.Jambukeshwar, G.S.Bhusagonda and others have taken special care towards the making of this book. I am grateful to all these people.

## ಎಂ.ಬಿ. ಲೋಹಾರ

'ಕಲ್ಯಾಣ ನಾಡು' ಎಂದರೆ ಭೌಗೋಳಿಕವಾಗಿ ಕರ್ನಾಟಕದ ಉತ್ತರದ ತುದಿಯಲ್ಲಿರುವ ಪ್ರದೇಶ. ಈ ಪ್ರದೇಶದಲ್ಲಿ ಆಗಿ ಹೋದ ಕಲಾವಿದರು ತಮ್ಮ ಬದುಕನ್ನು ಕಲೆಗಾಗಿಯೇ ಮೀಸಲಿಟ್ಟ ಪುಣ್ಯಾತ್ಮರು. ಜೀವಂತ ಇರುವವರೆಗೆ ಕಲೆಯನ್ನೇ ಉಸಿರಾಡಿದವರು. ಅಂತೆಯೇ ಇಂದು ರಾಷ್ಟ್ರ, ಅಂತರರಾಷ್ಟ್ರೀಯ ಮಟ್ಟದಲ್ಲಿ ಬೆಳೆದು ನಿಂತು ಈ ನಾಡಿಗೆ ಜಾಗತಿಕ ಮಟ್ಟದಲ್ಲಿ ಹೆಸರು ತಂದಿರುವರು.

ಎಸ್.ಎಂ. ಪಂಡಿತ್, ಎಂ.ಟಿ.ಭೋಪಲೆ, ಶಂಕರರಾವ್ ಆಳಂದಕರ ಅವರಂತಹ ಹಿರಿಯ ತಲೆಮಾರಿನ ಕಲಾವಿದರಿಂದ ಮೊದಲ್ಗೊಂಡು ಜೆ.ಎಸ್. ಖಂಡೇರಾವ್, ವ್ಹಿ.ಜಿ. ಅಂದಾನಿ, ಎ.ಎಸ್. ಪಾಟೀಲ, ಎಂ.ಬಿ. ಲೋಹಾರ ಅವರಂತಹ ಸಮಕಾಲೀನ ಕಲಾವಿದರು ಮತ್ತವರ ಪರಂಪರೆಯ ದಂಡೇ ಇವತ್ತು ಕರ್ನಾಟಕದ ದೃಶ್ಯಕಲಾ ಜಗತ್ತನ್ನು ಒಂದರ್ಥದಲ್ಲಿ ನಿರ್ದೇಶಿಸುತ್ತದೆ ಎಂದರೆ ಅತಿಶಯೋಕ್ತಿಯಲ್ಲ.

ಕಲಾಕೃತಿಗಳನ್ನು ರಚಿಸುತ್ತ, ಕಲಾವಿದರನ್ನು ಬೆಳೆಸುತ್ತ ನಮ್ಮ ನಡುವೆ ಸ್ಫೂರ್ತಿಯ ಚಿಲುಮೆಯಂತಿದ್ದವರು ಈಚೆಗೆ ಕಳಚಿಹೋಗಿರುವ ಕೊಂಡಿ (೨೦೦೮) ಎಂ.ಬಿ. ಲೋಹಾರ್ ಇಂದು ಭೌತಿಕವಾಗಿ ಅವರು ನಮ್ಮೊಂದಿಗಿಲ್ಲ. ಆದರೆ ತಾವು ಸೃಷ್ಟಿಸಿರುವ ಕಲಾಕೃತಿಗಳು ಮತ್ತು ಕಲಾವಿದರುಗಳ ಮೂಲಕ ಜೀವಂತವಾಗಿದ್ದಾರೆ. ಗುರು ಖಂಡೇರಾವ್, ಸಹಪಾಠಿ ಕಲಾವಿದ ಮಿತ್ರರುಗಳಾದ ವ್ಹಿ.ಜಿ. ಅಂದಾನಿ, ಬಸವರಾಜ್ ಉಪ್ಪಿನ, ಶಿವಶರಣ ಉಪ್ಪಿನ ಅವರನ್ನು ಒಳಗೊಂಡಂತೆ ಹಲವಾರು ಶಿಷ್ಯರು, ಸ್ನೇಹಿತರು, ಅಭಿಮಾನಿಗಳ ಸ್ಮೃತಿಯಲ್ಲಿ ಉಳಿದು ಹೋಗಿರುವರು.

ಇಂದು ಸಮೃದ್ಧವಾಗಿ ಬೆಳೆದು ನಿಂತು ಫಲ ನೀಡುವ ಒಂದು ಹೆಮ್ಮರದಂತೆ ಕಂಡು ಬರುವ ಲೋಹಾರ ಅವರ ಮೂಲ ಬೇರುಗಳಿರುವುದು ಬೀದರ್ ಜಿಲ್ಲೆಯ ಭಾಲ್ಕಿ ತಾಲೂಕಿನ 'ಕಣಜಿ' ಗ್ರಾಮದಲ್ಲಿ. ಮನೋಹರ ಲೋಹಾರ ಎಂಬ ಈ ಕಲಾವಿದ ಜನಿಸಿದ್ದು ೧೧.೦೮.೧೯೪೪ ರಲ್ಲಿ. ವಿಶ್ವಕರ್ಮ ಕಮ್ಮಾರ ಮನೆತನದ ಶ್ರೀ ಬಸವಂತರಾವ್ ಲೋಹಾರ ಅವರ ಮೂವರು ಮಕ್ಕಳಲ್ಲಿ ಇವರು ಎರಡನೆಯವರು. ಅಣ್ಣ ರಾಜಪ್ಪ, ಕೊನೆಯವರು ತಂಗಿ ಕಲಾವತಿ.

ಹಲವು ಕಲಾವಿದರಿಗಿದ್ದಂತೆ ಇವರಿಗೂ ಚಿಕ್ಕವಯಸ್ಸಿನಿಂದಲೇ ಚಿತ್ರಕಲೆಯಲ್ಲಿ ಆಸಕ್ತಿ.

ಮಣ್ಣಿನ ಎತ್ತುಗಳನ್ನು, ಗಣೇಶನ ವಿಗ್ರಹಗಳನ್ನು ಮಾಡುವುದು ಹಬ್ಬ ಹುಣ್ಣಿಮೆಗಳಲ್ಲಿ, ಮದುವೆ ಸಮಾರಂಭಗಳಲ್ಲಿ ಗೋಡೆಗಳ ಮೇಲೆ ಚಿತ್ರ ಬರೆಯುವುದು ಇವರ ಬಾಲ್ಯದ ಹವ್ಯಾಸಗಳಾಗಿದ್ದವು.ಇವರೊಳಗಿನ ಚಿತ್ರಕಲಾಸಕ್ತಿಗೆ ಅನೇಕರು ಎಳವೆಯಲ್ಲೇ ಪ್ರೋತ್ಸಾಹ ನೀಡಿದರು.

'ಮನೋಹರ ಹುಟ್ಟು ಕಲಾವಿದ. ಚಿತ್ರಕಲೆ ಅವನಿಗೆ ದೈವದತ್ತವಾಗಿ ಬಂದಿದೆ' ಎಂದು ಅನೇಕರು ಇವರ ಬಾಲ್ಯದ ಸಂದರ್ಭದಲ್ಲೇ ಹೇಳಿರುವುದುಂಟು. ಹಳ್ಳಿಯ ಸುಂದರ ಪರಿಸರದಲ್ಲಿ ಆಟೋಟಗಳ ನಡುವೆ ಬೆಳೆದ ಇವರು ಹಳ್ಳಿಯ ಸುಂದರ ಕ್ಷಣಗಳನ್ನು ಬೆರಗುಗಣ್ಣುಗಳ ಮೂಲಕ ಹೃದಯ ತುಂಬಿಕೊಂಡವರು. ಹಳ್ಳಿಯಲ್ಲಿ ಕುಶಲ ಕರ್ಮಿಗಳು ಮಾಡುತ್ತಿದ್ದ ಸೂಕ್ಷ್ಮ ಕೆಲಸಗಳನ್ನು ತದೇಕ ಚಿತ್ತದಿಂದ ಗಮನಿಸುತ್ತಿದ್ದ ಲೋಹಾರರು ಅನಂತರ ಆ ಕೆಲಸಗಳನ್ನು ಕರಗತಮಾಡಿಕೊಂಡದ್ದು ಅವರಲ್ಲಿನ ಸೂಕ್ಷ್ಮ ಕೌಶಲಕ್ಕೆ ಸಾಕ್ಷಿಯಾಗಿದೆ. ಕುಶಲ ಕರ್ಮಿಗಳ ಮನೆತನದಲ್ಲಿ ಹುಟ್ಟಿ ಬೆಳೆದುದರಿಂದ ಅವರಿಗೆ ಅದು ಸಹಜವೂ ಮತ್ತು ಸರಳವೂ ಆಗಿತ್ತೆಂದು ಬೇರೆ ಹೇಳಬೇಕಿಲ್ಲ. ಕಣಜಿ ಗ್ರಾಮದಲ್ಲಿ ಪ್ರಾಥಮಿಕ ಶಾಲೆಯಲ್ಲಿ ಓದುತ್ತಿರುವಾಗಲೇ ಚಿತ್ರಗಳನ್ನು ಗೀಚುವ ಹವ್ಯಾಸ ಅಂಟಿಕೊಂಡಿದ್ದಿತು. ಹಾಗಾಗಿ ಓದಿನಲ್ಲಿ ಆಸಕ್ತಿ ಅಷ್ಟಕಷ್ಟೆ. ಲೋಹಾರರು ಆಡುವ ಆಟ ಇತರ ಮಕ್ಕಳಿಗಿಂತ ಭಿನ್ನವಾಗಿರುತ್ತಿತ್ತು. ಅವರೇ ನೆನಪಿಸಿಕೊಳ್ಳುವ ಒಂದು ಉದಾಹರಣೆ; ತಮ್ಮ ಮನೆಯಲ್ಲಿನ ಕಸಬರಿಗೆಯ (ಪೊರಕೆ) ಕಡ್ಡಿಗಳಿಂದ ಒಂದು ವಾಹನ ತಯಾರಿಸಿ ಅದರ ಹಿಂದೆ ಕಾಗದದಿಂದ ರಚಿಸಿದ ಫ್ಯಾನ್ ಒಂದನ್ನು ಅಳವಡಿಸಿ ಬೀಸುವ ಗಾಳಿಯಗುಂಟ ಬಿಡುತ್ತಿದ್ದರು. ಆಗ ಅದು ಗಾಳಿಯ ರಭಸಕ್ಕೆ ಚಲಿಸುತ್ತಿತ್ತು. ಅದರ ಹಿಂದೆ ಇವರೂ ಓಡಿ, ಕುಣಿದು ಸಂತೋಷ ಪಡುತ್ತಿದ್ದರಂತೆ. ಹೀಗೆ ಬಾಲ್ಯದಲ್ಲಿಯೇ ಇವರಲ್ಲಿನ ಸೃಜನಶೀಲತೆ ಗರಿಗೆದರಿದ್ದು ಬೆಳೆಯುತ್ತಲೇ ಹೋಯಿತು.

ಮನೆಯ ಪರಿಸರವೂ ಇವರ ಮೇಲೆ ಪ್ರಭಾವ ಬೀರಿತು. ತಂದೆಯವರಾದ ಬಸವಂತರಾವ್ ಲೋಹಾರರು ಸ್ವತಃ ನಾಟಕಕಾರರಾಗಿದ್ದರು. ಹಳ್ಳಿಯಲ್ಲಿ ನಡೆಯುವ ಸಾಮಾಜಿಕ ನಾಟಕಗಳಲ್ಲಿ ಅವರದು ಪ್ರಮುಖ ಪಾತ್ರವಾಗಿತ್ತು. ಸಂಗೀತ ಪ್ರಿಯರೂ ಆಗಿದ್ದ ಅವರು ಹಾಡುಗಳನ್ನೂ ಹಾಡುತ್ತಿದ್ದರು. ಮನೆಯಲ್ಲಿನ ಇತರ ಸದಸ್ಯರೂ ನಾಟಕ, ಭಜನೆ ಮುಂತಾದ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಆಸಕ್ತಿ ಹೊಂದಿದ್ದರು. ಸಹಜವಾಗಿಯೇ ಮನೆಯಲ್ಲಿನ ಸಾಂಸ್ಕೃತಿಕ ವಾತಾವರಣ ಇವರು ಕಲಾವಿದನಾಗಿ ಬೆಳೆಯುವುದಕ್ಕೆ ಪೂರಕ ಮತ್ತು ಪ್ರೇರಕವಾಗಿದ್ದಿತು. ಮನೆಯಲ್ಲಿ ತಂದೆಯವರು ನೇತು ಹಾಕಿದ್ದ ರಾಜಾ ರವಿವರ್ಮನ ಕ್ಯಾಲೆಂಡರ್ ಚಿತ್ರಗಳು ಇವರ ಮನಸ್ಸನ್ನು ಆಕರ್ಷಿಸಿದ್ದವು. ಅವುಗಳನ್ನು ನಕಲು ಮಾಡುವಲ್ಲಿ ತಲ್ಲೀನರಾಗಿರುತ್ತಿದ್ದ ಲೋಹಾರರು ತಮ್ಮೂರಿನಲ್ಲಿ ನಾರಿನಿಂದ ಹಗ್ಗ ಹೊಸೆಯುತ್ತಿದ್ದವರ ಚಿತ್ರಗಳನ್ನು ಕಾಗದದ ಮೇಲೆ ರಚಿಸುತ್ತಿದ್ದರು. ಮತ್ತು ಆ ಚಿತ್ರಗಳಿಗೆ ಊರಲ್ಲಿ ಸಿಗುವ ಸಾಮಾನ್ಯ ಬಣ್ಣಗಳನ್ನೇ ತುಂಬಿ ಊರಿನ ಜನಗಳ ಗಮನ ಸೆಳೆಯುತ್ತಿದ್ದರು.

## ಕಣಜಿಯಿಂದ ಕಲಬುರ್ಗಿಗೆ

ಹುಟ್ಟೂರಾದ ಕಣಜಿಯಲ್ಲಿ ಪ್ರಾಥಮಿಕ ಅಭ್ಯಾಸ ಮುಗಿಸಿಕೊಂಡು ಕಲಬುರ್ಗಿಗೆ ಬಂದ ಲೋಹಾರರು ಶ್ರೀ ಶರಣ ಬಸವೇಶ್ವರ ಪ್ರೌಢ ಶಾಲೆಯಲ್ಲಿ ಎಂಟನೇ ತರಗತಿಗೆ ಪ್ರವೇಶ ಪಡೆದುಕೊಂಡರು. ಆಶ್ಚರ್ಯವೆಂದರೆ ಎಂಟನೆಯ ತರಗತಿಯಲ್ಲಿ ಓದುತ್ತಿರುವಾಗಲೇ ಮೊದಲ ವರ್ಷದ ಚಿತ್ರಕಲಾ ತರಗತಿಗೂ ಪ್ರವೇಶ ದೊರಕಿಸಿಕೊಂಡರು. (೧೯೬೨) ಆಗ ಆದರ್ಶ ಕಲಾಮಂದಿರದ ಪ್ರಾಚಾರ್ಯರಾಗಿದ್ದ ಕಲಾವಿದ ಶ್ರೀ ಜೆ.ಎಸ್. ಖಂಡೇರಾವ್ ಅವರು ಇವರಲ್ಲಿನ ಚಿತ್ರಕಲಾ ಕೌಶಲ್ಯ ಮತ್ತು ಆಸಕ್ತಿ ಕಂಡು ಕರೆದು ಪ್ರವೇಶ ನೀಡಿದರು. ಅಲ್ಲದೆ ಪ್ರೌಢಶಾಲೆಯಲ್ಲಿ ಶಿಕ್ಷಕರಾಗಿದ್ದ ವಿ.ಎಸ್ ಭಂಕೂರ ಅವರೂ ಸಾಕಷ್ಟು ಸ್ಫೂರ್ತಿ ನೀಡಿ ಪ್ರೋತ್ಸಾಹಿಸಿದರು. ಈ ಇಬ್ಬರೂ ಕಲಾ ಗುರುಗಳು ನೀಡಿದ ಪ್ರೋತ್ಸಾಹ ಹಾಗೂ ಸಹಕಾರಗಳನ್ನೂ ಲೋಹಾರರು ತಮ್ಮ ಜೀವನದ ಕೊನೆಯ ದಿನಗಳಲ್ಲೂ ಸ್ಮರಿಸಿಕೊಂಡಿರುವರು.

## ಚಿತ್ರಕಲಾಭ್ಯಾಸ

ಚಿತ್ರಕಲೆಯನ್ನು ಕಲಿಸಲಾಗುತ್ತದೆಯೇ? ಅದಕ್ಕಾಗಿ ಶಾಲೆಗಳಿವೆಯೇ? ಎಂದು ತುಟಿಗಳ ಮೇಲೆ ಬೆರಳಿಟ್ಟು ಕೇಳುವಂತಹ ಕಾಲವದು. (೧೯೬೦ ರ ದಶಕ) ಮುಂಬೈಯಲ್ಲಿ ಚಿತ್ರಕಲಾ ಡಿಪ್ಲೋಮಾ ಪಡೆದು ಮರಳಿ ಬಂದಿದ್ದ ಜೆ.ಎಸ್. ಖಂಡೇರಾವ್ ಗುಲಬರ್ಗಾದಲ್ಲಿ ಆದರ್ಶ ಕಲಾ ಶಾಲೆಯನ್ನು (೧೯೬೫) ಆರಂಭಿಸಿದ್ದರು. ಈ ಕಲಾ ಶಾಲೆಗೆ ಮೊದಲ ತಂಡದ ವಿದ್ಯಾರ್ಥಿಯಾಗಿ ಎಂ.ಬಿ.ಲೋಹಾರ ಅವರು ಪ್ರವೇಶ ಪಡೆದರು. ಚಿತ್ರಕಲೆಯ ಮೂಲ ಪಾಠಗಳನ್ನು ಖಂಡೇರಾವ್ ಗುರುಗಳ ಮಾರ್ಗದರ್ಶನದಲ್ಲಿ ಕಲಿಯುತ್ತಲೇ ಪ್ರಖ್ಯಾತ ಕಲಾವಿದರಾದ ಕೆ.ಕೆ. ಹೆಬ್ಬಾರ, ಹುಸೇನ್, ಆಲಮೇಲಕರ್, ಎಸ್. ಎಂ. ಪಂಡಿತ್ ಅವರಂತಹ ಕಲಾವಿದರುಗಳ ವ್ಯಕ್ತಿತ್ವ ಮತ್ತು ಕೃತಿಗಳ ಪ್ರಭಾವಕ್ಕೆ ಒಳಗಾದರು. ಇದರಿಂದಾಗಿ ಅವರ ಕಲಿಕೆ ತೀವ್ರವಾಯಿತು. ವಿಶೇಷವಾಗಿ ಪಂಡಿತರ ಕಲಾಕೃತಿಗಳು ತಮಗೆ ಎಲ್ಲಿಲ್ಲದ ಪ್ರಭಾವ, ಆಕರ್ಷಣೆ ಉಂಟುಮಾಡಿವೆ ಎಂದು ಹೇಳಿಕೊಂಡಿರುವರು. ಕಲಾಕೃತಿಗಳ ರಚನೆಗಾಗಿ ಪಂಡಿತರು ಆಯ್ಕೆ ಮಾಡಿಕೊಂಡಿರುವ ವಸ್ತು ವಿಷಯಗಳು, ಸಂಯೋಜನೆ, ವರ್ಣ ವಿನ್ಯಾಸಗಳಿಂದಲೂ ಸೆಳೆಯಲ್ಪಟ್ಟಿದ್ದರು. ಜೊತೆಗೆ ಕ್ಯಾಲೆಂಡರ್ ಕಲೆಯ ಬಗ್ಗೆ ವಿಶೇಷ ಆಸಕ್ತಿ ಹೊಂದಿ ಸಾಕಷ್ಟು ಸಚಿತ್ರ ಕ್ಯಾಲೆಂಡರ್‌ಗಳನ್ನು ಸಂಗ್ರಹಿಸಿದ್ದ, ಪ್ರಥಮ ಗುರುವೂ ಆಗಿದ್ದ ವಿ.ಎಸ್. ಭಂಕೂರ, ನಿಸರ್ಗ ಚಿತ್ರ ಹಾಗೂ ಭಾವಚಿತ್ರಗಳಲ್ಲಿ ಪ್ರೌಢಿಮೆ ಹೊಂದಿದ್ದ ದ್ವಿತೀಯ ಗುರುಗಳಾದ ಜೆ.ಎಸ್. ಖಂಡೇರಾವ್ ಈ ಈರ್ವರ ವ್ಯಕ್ತಿತ್ವಗಳಿಂದಲೂ ಪ್ರಭಾವಿತರಾಗಿದ್ದರು. ಲೋಹಾರರು ಕಲಾನಿಕೇತನದಲ್ಲಿ ನಾಲ್ಕೈದು ವರ್ಷ ಗುರುಗಳ ಗರಡಿಯಲ್ಲಿ ರೂಪುಗೊಂಡ ಶಿಷ್ಯರುಗಳಲ್ಲಿ ಒಬ್ಬರಾಗಿ ೧೯೭೧ ರಲ್ಲಿ ಉನ್ನತ ಚಿತ್ರಕಲಾ ಪದವಿಯನ್ನು ಗಳಿಸಿಕೊಂಡರು. ಅವರ ಈ ಸಾಧನೆ ಆಗ ಅಪರೂಪದ ಸಂಗತಿಯೇ ಆಗಿದ್ದಿತು.

## ವೃತ್ತಿ, ಕಲಾ ಬದುಕು

ಕಲೆ ಎಲ್ಲರನ್ನೂ ಆಕರ್ಷಿಸುತ್ತದೆ, ಆದರೆ ಕೆಲವರನ್ನು ಮಾತ್ರವೇ ತನ್ನ ತೆಕ್ಕೆಗೆ ಸೆಳೆದುಕೊಳ್ಳುತ್ತದೆ ಎಂಬ ಮಾತೊಂದಿದೆ. ಲೋಹಾರರು ಕೇವಲ ಕಲೆಯಿಂದ ಆಕರ್ಷಿತರಾದವರು ಮಾತ್ರವೇ ಅಲ್ಲ, ಕಲೆಯ ತೋಳ್ತೆಕ್ಕೆಗೇ ಸಿಲುಕಿದವರು. ಹಾಗೆ ಸಿಲುಕಿ ಚಿತ್ರಕಲೆಯಲ್ಲಿ ಆರ್ಟ್‌ಮಾಸ್ಟರ್ ಡಿಪ್ಲೋಮಾ ಪದವಿ (೧೯೭೧) ಪಡೆದುಕೊಂಡರು. ಆದರೆ ತಕ್ಷಣಕ್ಕೆ ಮುಂದೇನು? ದಾರಿ ಯಾವುದು? ಏನು ಮಾಡುವುದು? ಎಂಬ ಪ್ರಶ್ನೆಗಳು ಅವರ ಮುಂದೆ ರುದ್ರನರ್ತನ ಮಾಡಿದುವು. ಆ ಕ್ಷಣಕ್ಕೆ ಏನೂ ಹೊಳೆಯದೆ ಸ್ವಗ್ರಾಮ ಕಣಜಿಯತ್ತ ಮುಖ ಮಾಡುವುದು ಅನಿವಾರ್ಯವಾಯಿತು. ಸ್ವಗ್ರಾಮಕ್ಕೆ ಮರಳಿ ಬಂದರು. ಆದರೆ ಹಳ್ಳಿಯ ಪರಿಸರದಲ್ಲಿ ಈ ಕಲಾವಿದ ಕಳೆದು ಹೋಗಲಿಲ್ಲವೆಂಬುದೇ ಸಂತೋಷದ ಸಂಗತಿ. ಅಲ್ಲಿಯೂ ಚಿತ್ರಕಲಾಕೃತಿಗಳ ರಚನೆಯನ್ನು ಮುಂದುವರೆಸಿದರು.

೧೯೭೪ರ ಒಂದು ದಿನ ಕಣಜಿ ಗ್ರಾಮಕ್ಕೆ ಶಿಕ್ಷಣ ಇಲಾಖೆಯ ಅಧಿಕಾರಿ ಶ್ರೀ ಬಿವಟಿ ಎಂಬುವವರೊಬ್ಬರು ಬಂದಿದ್ದರು. ಲೋಹಾರರ ಕಲೆಯ ಬಗೆಗೆ ಆಗಲೇ ಕೇಳಿ ತಿಳಿದುಕೊಂಡಿದ್ದ ಆ ವ್ಯಕ್ತಿ ಲೋಹಾರ ಅವರ ಮನೆಗೆ ತೆರಳಿದರು. ಅಲ್ಲಿ ಅವರ ಕಲಾಕೃತಿಗಳನ್ನೆಲ್ಲ ಸೂಕ್ಷ್ಮವಾಗಿ ವೀಕ್ಷಿಸಿದರು ಮಾತ್ರವಲ್ಲ, ಈ ಕಲಾವಿದನಲ್ಲಿ ಚಿಗುರೊಡೆದ ಚಿತ್ರಕಲೆ ಬೆಳೆದು ಪಲ್ಲವಿಸಬೇಕೆಂದುಕೊಂಡು ಚಿತ್ರಕಲಾ ಶಿಕ್ಷಕನನ್ನಾಗಿ ನೇಮಕ ಮಾಡಿಕೊಂಡರು. ಆರಂಭದಲ್ಲಿ ಲೋಹಾರ ಅವರು ಚಿತ್ರಕಲಾ ಶಿಕ್ಷಕರಾಗಿ ಬೀದರ ಜಿಲ್ಲೆಯ ಔರಾದ್‌ನಲ್ಲಿ ಒಂದು ವರ್ಷ ಸೇವೆ ಸಲ್ಲಿಸಿದರು. ಅನಂತರ ಬಸವಕಲ್ಯಾಣಕ್ಕೆ ಸೇವೆಯನ್ನು ವರ್ಗಾಯಿಸಿಕೊಂಡರು. ಅಲ್ಲಿ ಸತತ ನಾಲ್ಕು ವರ್ಷ ಸೇವೆ ಸಲ್ಲಿಸಿದರು. ಆದರೆ ಅದೇಕೋ ಅವರು ಈ ವೃತ್ತಿಯಲ್ಲಿ ಮುಂದುವರೆಯುವ ಆಸಕ್ತಿ ಕಳೆದುಕೊಂಡರು. ಕೆಲಸ ತೊರೆದು ಮತ್ತೆ ಕಣಜಿಗೆ ಮರಳಿದರು. ನಾಲ್ಕು ವರ್ಷ ಕಣಜಿಯಲ್ಲೇ ಉಳಿಯುವುದು ಅನಿವಾರ್ಯವಾಯಿತು. ಆದರೆ ಈ ಕಾಲಾವಧಿಯಲ್ಲೂ ಅವರು ಚಿತ್ರಿಸುವುದನ್ನು ನಿಲ್ಲಿಸಲಿಲ್ಲ. ದಿನಕ್ಕೆ ನಲವತ್ತಕ್ಕೂ ಮಿಕ್ಕಿ ಸ್ಕೆಚ್‌ಗಳನ್ನು ಹಾಗೂ ಆಗಾಗ ಭಾವಚಿತ್ರ, ವ್ಯಕ್ತಿಚಿತ್ರಗಳ ರಚನೆಯನ್ನು ಮುಂದುವರೆಸಿದ್ದರು. ಆಗಲೇ ಒಪ್ಪಿಕೊಂಡು ರೇಖಾಚಿತ್ರ, ವರ್ಣಚಿತ್ರಗಳನ್ನೂ ರಚಿಸುತ್ತಲಿದ್ದರು.

ಇತ್ತ ಗುಲಬರ್ಗಾದಲ್ಲಿ ಕಲೆಯ ವಾತಾವರಣ ದಿನೇ ದಿನೇ ಪ್ರವರ್ಧಮಾನಕ್ಕೆ ಬರುತ್ತಲಿದ್ದಿತು. ಲೋಹಾರರು ಕಲಿತಿದ್ದ ಆದರ್ಶ ಕಲಾಮಂದಿರ ಅಂದಾನಿಯವರ ಕೈಸೇರಿತ್ತು. ಆರ್ಥಿಕ ತೊಂದರೆಯಿಂದಾಗಿ ಕಲಾ ಶಾಲೆಯನ್ನು ಮುನ್ನಡೆಸುವುದು ಕಷ್ಟವಾದಾಗ ಅದರ ಉಳಿವಿಗಾಗಿ ಖಂಡೇರಾವ್ ಅವರು ತಮ್ಮ ಚುರುಕಾದ ಶಿಷ್ಯ ಅಂದಾನಿಯವರ ಕೈಗೆ ಒಪ್ಪಿಸಿ, ತಾವು ಶ್ರೀ ಶರಣ ಬಸವೇಶ್ವರ ಮಹಾವಿದ್ಯಾಲಯದ ಲಲಿತಕಲಾ ವಿಭಾಗದಲ್ಲಿ ಕಲಾ ಅಧ್ಯಾಪಕರಾಗಿ ಸೇವೆಗೆ ಸೇರಿದ್ದರು.

ಯೋಗಾಯೋಗಾವೆನ್ನುವಂತೆ ತಾವು ಕಲಿತ ಆದರ್ಶ ಕಲಾಮಂದಿರದಲ್ಲಿಯೇ ಉಪನ್ಯಾಸಕನಾಗಿ ಸೇವೆಸಲ್ಲಿಸಲು ಅಂದಾನಿಯವರಿಂದ ಲೋಹಾರ ಅವರಿಗೆ ಕರೆ ಬಂದಿತು.

'ರೋಗಿ ಬಯಸಿದ್ದು ಹಾಲು ಅನ್ನ, ಡಾಕ್ಟರ್ ಹೇಳಿದ್ದೂ ಹಾಲು ಅನ್ನ' ಎಂಬಂತೆ ಸಹಪಾಠಿ ಗೆಳೆಯ, ಪ್ರಾಚಾರ್ಯ ಅಂದಾನಿಯವರ ಕರೆಯಿಂದ ಲೋಹಾರ ಅವರಿಗೆ ಅತೀವ ಸಂತೋಷವಾಯಿತು.

ಆದರ್ಶ ಕಲಾಮಂದಿರದಲ್ಲಿನ ಉಪನ್ಯಾಸಕ ವೃತ್ತಿ ಲೋಹಾರರಲ್ಲಿ ಸಂತೃಪ್ತಿಯನ್ನು ತಂದಿತು. ವಿದ್ಯಾರ್ಥಿಗಳೊಂದಿಗೆ ಸದಾ ಕೆಲಸದಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಆಗಾಗ ಅಂದಾನಿಯವರು ಕಲಾ ಶಾಲೆಗೆ ಹೊರಗಡೆಯಿಂದ ಕಲಾವಿದರನ್ನು ಕರೆಸಿ ಪ್ರಾತ್ಯಕ್ಷಿಕೆ, ಉಪನ್ಯಾಸ, ಸಂವಾದಗಳನ್ನು ಏರ್ಪಡಿಸುತ್ತಿದ್ದರು. ಇದರಿಂದ ಲೋಹಾರ ಅವರಿಗೆ ಬಂದು ಹೋಗುವ ಅನೇಕ ಕಲಾವಿದರ ಪರಿಚಯ ಉಂಟಾಯಿತು. ಒಮ್ಮೆ ಅಂದರೆ ೧೯೮೦ರ ಸುಮಾರಿನಲ್ಲಿ ನವದೆಹಲಿಯ ಸಿ.ಸಿ.ಆರ್.ಟಿ. ಸಂಸ್ಥೆಯಲ್ಲಿ ಚಿತ್ರಕಲಾ ಶಿಕ್ಷಣದ ತರಬೇತಿಗಾಗಿ ತೆರಳುವ ಸದವಕಾಶ ಒದಗಿ ಬಂದಿತ್ತು. ತರಬೇತಿಯಲ್ಲಿರುವಾಗ ಅಂತರರಾಷ್ಟ್ರೀಯ ಮಟ್ಟದ ಪ್ರಸಿದ್ಧಿಯ ಪ್ರಯೋಗಶೀಲ ಕಲಾವಿದ ಎಂ.ಎಫ್. ಹುಸೇನರ ಪರಿಚಯ ಪ್ರಥಮ ಬಾರಿಗೆ ಆದುದರ ಬಗೆಗೆ ನೆನಪಿಸಿಕೊಳ್ಳುತ್ತ ಲೋಹಾರರು ತಮ್ಮ ಅನುಭವಗಳನ್ನು ಭಾವುಕತೆಯಿಂದ ಬಿಚ್ಚಿಡುತ್ತಾರೆ. ಹುಸೇನರನ್ನು ಮೊದಲ ಬಾರಿಗೆ ಕಂಡಾಗ ಪುಳಕಿತಗೊಂಡುದಾಗಿ ಹೇಳುತ್ತ ಅವರ ಕಲಾಕೃತಿಗಳ ವಸ್ತು, ಸಂಯೋಜನೆ, ವರ್ಣವಿನ್ಯಾಸ ಕ್ರಮ, ಮೈವಳಿಕೆ, ಆಕೃತಿಗಳು ಅಲ್ಲದೆ ಭಾರತೀಯ ಸಂಸ್ಕೃತಿ ಚಿತ್ರಣ ಮೊದಲಾದ ಅಂಶಗಳ ಕುರಿತ ಗ್ರಹಿಕೆಗಳನ್ನು ತಮ್ಮದೇ ಆದ ಮಾತುಗಳಲ್ಲಿ ವಿವರಿಸುತ್ತಾರೆಂದರೆ, ಕಲೆ ಮತ್ತು ಕಲಾವಿದರ ಬಗೆಗೆ ಅವರಿಗಿರುವ ದಾಹ ಎಷ್ಟು, ಯಾವ ಸ್ವರೂಪದ್ದೆಂಬುದು ಅರಿವಾಗುತ್ತದೆ.

ಆದರ್ಶ ಕಲಾಮಂದಿರದಲ್ಲಿ ಪ್ರತಿನಿತ್ಯ ವಿದ್ಯಾರ್ಥಿಗಳೊಂದಿಗೆ ಹೆಚ್ಚು ಕಾಲ ಸದುಪಯೋಗಪಡಿಸಿಕೊಳ್ಳುವುದೆಂದರೆ ಲೋಹಾರ ಅವರಿಗೆ ಬಹಳ ಇಷ್ಟದ ಕೆಲಸವಾಗಿತ್ತು. ವಿದ್ಯಾರ್ಥಿಗಳನ್ನು ತಿದ್ದುವುದು, ತರಬೇತಿಗೊಳಿಸುವುದು ಕೇವಲ ಕರ್ತವ್ಯವೆಂದು ತಿಳಿಯದೇ ನಿಜವಾದ ಅರ್ಥದಲ್ಲಿ ಒಬ್ಬ ಮಾರ್ಗದರ್ಶಕ ಮತ್ತು ಸ್ನೇಹಿತನಂತೆ ಇರುತ್ತಿದ್ದರು. ಶೈಕ್ಷಣಿಕ ಪ್ರವಾಸ ಮತ್ತು ಕಲಾ ಶಿಬಿರ ಹಾಗೂ ಕಲಾ ಪ್ರದರ್ಶನಗಳನ್ನು ಪ್ರತೀ ವರ್ಷ ಹಮ್ಮಿಕೊಳ್ಳುವುದು ಆದರ್ಶ ಕಲಾಮಂದಿರದ ಪರಿಪಾಠವಾಗಿದ್ದಿತು. ವಿದ್ಯಾರ್ಥಿಗಳ ಬೆಳವಣಿಗೆಗೋಸ್ಕರ ಸಂಸ್ಥೆಯ ಕಾರ್ಯದರ್ಶಿಗಳಾಗಿರುವ ಅಂದಾನಿಯವರು ಇದನ್ನು ಕಡ್ಡಾಯಗೊಳಿಸಿದ್ದರು. ಹಾಗಾಗಿ ಲೋಹಾರರು ತುಂಬ ಆಸಕ್ತಿಯಿಂದಲೇ ವಿದ್ಯಾರ್ಥಿಗಳೊಟ್ಟಿಗೆ ಹಂಪಿ, ಐಹೊಳೆ, ಬಾದಾಮಿ, ಪಟ್ಟದಕಲ್ಲು, ಬಿಜಾಪುರ, ಅಜಂತ, ಎಲ್ಲೋರ ಮೊದಲಾದ ಐತಿಹಾಸಿಕ ಸ್ಥಳಗಳಿಗೆ ತೆರಳಿ ಹತ್ತಾರು ದಿನಗಳ ಕಾಲ ಅಲ್ಲಿದ್ದು ಐತಿಹಾಸಿಕ ಸ್ಮಾರಕಗಳು, ಶಿಲ್ಪಕಲಾಕೃತಿಗಳ ರೇಖಾಚಿತ್ರ, ವರ್ಣಚಿತ್ರಗಳನ್ನು ವಿದ್ಯಾರ್ಥಿಗಳೊಟ್ಟಿಗೇ ರಚಿಸುತ್ತಿದ್ದರು. ಇಂತಹ ಹಲವು ಪ್ರವಾಸಗಳ ಅನುಭವಗಳನ್ನು ನೆನಪಿಸಿಕೊಳ್ಳುತ್ತಾರವರು.

ಒಮ್ಮೆ ಲೋಹಾರ ಅವರು ಆದರ್ಶ ಕಲಾಮಂದಿರದ ವಿದ್ಯಾರ್ಥಿಗಳನ್ನು ಕರೆದುಕೊಂಡು ಬಂದು ಹಂಪಿಯಲ್ಲಿ (೧೯೯೯) ಬಿಡಾರ ಹೂಡಿದ್ದರು. ಆ ಸಂದರ್ಭದಲ್ಲಿ ನಾನು (ಲೇಖಕ)

ಕನ್ನಡ ವಿಶ್ವವಿದ್ಯಾಲಯದಲ್ಲಿ ಪಿ.ಎಚ್.ಡಿ. ಅಧ್ಯಯನ ಮಾಡುತ್ತಲಿದ್ದೆ. ಗುಲಬರ್ಗಾದಿಂದ ಲೋಹಾರರು ಮತ್ತವರ ವಿದ್ಯಾರ್ಥಿಗಳು ಚಿತ್ರರಚನೆಗಾಗಿ ಹಂಪಿಗೆ ಬಂದಿರುವುದು ತಿಳಿದು ಸಾಯಂಕಾಲದ ಹೊತ್ತಿನಲ್ಲಿ ಅವರನ್ನು ಕಾಣಲು ಹೋದೆ. ಖಾಸಗಿ ಕೋಣೆಯೊಂದನ್ನು ಬಾಡಿಗೆ ಹಿಡಿದು ತಂಗಿದ್ದ ಅವರು ಜ್ವರದಿಂದ ಬಳಲುತ್ತ ಮಲಗಿದ್ದರು. ತಕ್ಷಣ ಅವರನ್ನು ಹತ್ತಿರದ ಕಮಲಾಪುರಕ್ಕೆ ಆಟೋದಲ್ಲಿ ಕರೆತಂದು ಚಿಕಿತ್ಸೆ ಕೊಡಿಸಿ, ಗುಲಬರ್ಗಾಕ್ಕೆ ಮರಳಲು ಹೇಳಿದೆ. ಅದಕ್ಕವರು ಒಪ್ಪಲಿಲ್ಲ. 'ಅಂದಾನಿ ಸರ್ ಅವರು ನನಗೆ ಜವಾಬ್ದಾರಿ ವಹಿಸಿ ಕಳುಹಿಸಿದ್ದಾರೆ. ನಾನು ಇನ್ನೂ ಮೂರು ದಿನ ಇಲ್ಲಿದ್ದು ಅವಧಿ ಮುಗಿಸಿಕೊಂಡೇ ಹೊರಡುತ್ತೇನೆ..... ಸರ್ ನಿಮಗೆ ಥ್ಯಾಂಕ್ಸ್' ಎಂದರು. ಲೋಹಾರ ಅವರ ಕರ್ತವ್ಯ ಪ್ರಜ್ಞೆ, ನಿಷ್ಠೆ ಮತ್ತು ಸೌಜನ್ಯಗಳು ಎಂತಹವು ಎಂಬುದು ಇದರಿಂದ ಸ್ಪಷ್ಟವಾಗುತ್ತದಲ್ಲವೆ?

ಆದರ್ಶ ಕಲಾಮಂದಿರ ಸಂಸ್ಥೆಯಲ್ಲಿ ಉಪನ್ಯಾಸಕರಾಗಿ ಸೇವೆಯಲ್ಲಿದ್ದ ಲೋಹಾರ ಅವರಿಗೆ ಸದವಕಾಶವೊಂದು ಕೂಡಿ ಬಂದಿತು. ಪ್ರೊ. ಅಂದಾನಿಯವರು ೧೯೮೮ರಲ್ಲಿ ಈ ಸಂಸ್ಥೆಯಲ್ಲಿ ಡಿಪ್ಲೋಮಾ ತರಗತಿಗಳೊಂದಿಗೆ ಬಿ.ಎಫ್.ಎ. ಪದವಿ ತರಗತಿಗಳನ್ನು ಆರಂಭಿಸಿದರು. ಅದೇ ಇಂದು 'ಮಾತೋಶ್ರೀ ಮಾಣಿಕಭಾಯಿ ಕೊಠಾರಿ (ವಿದ್ಯಾಚಂದ್ರ ಕೊಠಾರಿಯವರ ತಾಯಿಯ ಹೆಸರು) ಕಾಲೇಜ್ ಆಫ್ ವಿಜುಯಲ್ ಆರ್ಟ್' ಎಂದು ಪ್ರಸಿದ್ಧವಾಗಿರುವುದು. ಅಂದಾನಿಯವರು ಇದರ ಪ್ರಾಚಾರ್ಯರಾಗಿ ಕೆಲಸ ನಿರ್ವಹಿಸಬೇಕಾಗಿ ಬಂದುದರಿಂದ ಸಂಸ್ಥೆಯ ಪ್ರಾಚಾರ್ಯ ಹುದ್ದೆಯನ್ನು ಲೋಹಾರ ಅವರಿಗೆ ವಹಿಸಿಕೊಟ್ಟರು. ತಮಗೆ ಒದಗಿ ಬಂದ ಈ ಹುದ್ದೆಗೆ ಗೌರವ ತರುವಂತೆ ಜವಾಬ್ದಾರಿತನದಿಂದ ತಾವು ಸೇವೆ ಸಲ್ಲಿಸಿರುವುದಾಗಿ ಮತ್ತು ಅಂದಾನಿಯವರ ಪ್ರೀತಿಗೆ ಪಾತ್ರರಾಗಿರುವುದಾಗಿ ಲೋಹಾರರು ಹೆಮ್ಮೆಯಿಂದ ಹೇಳಿಕೊಂಡಿರುವರು. 'ಅಂದಾನಿಯವರು ಒಬ್ಬ ಉತ್ತಮ ಕಲಾವಿದರು, ಬೇರೆಯವರಿಗೆ ಸಹಾಯ ಮಾಡುವ ಗುಣ ಅವರಲ್ಲಿದೆ. ತಾವು ಬೆಳೆದು ಬೇರೆಯವರಿಗೂ ಬೆಳೆಯಲು ಪ್ರೋತ್ಸಾಹ ನೀಡುತ್ತಾರೆ. ಆ ಸಾಮರ್ಥ್ಯ ಅವರಿಗಿದೆ. ಅವರು ಸದಾ ಹೊಸದನ್ನು ಕಾಣುವ, ಕಟ್ಟುವ ಇಚ್ಛೆಯುಳ್ಳವರು. ಅವರಿಗೆ ಧೈರ್ಯವೂ ಹೆಚ್ಚು. ಅವರು ಒಬ್ಬ ವ್ಯಕ್ತಿ ಮಾತ್ರ ಅಲ್ಲ ಒಂದು ಶಕ್ತಿ. ಅವರಿಂದಾಗಿ ಈ ಭಾಗದಲ್ಲಿ (ಹೈದರಾಬಾದ್ ಕರ್ನಾಟಕ) ಕಲೆ ಮತ್ತು ಕಲಾವಿದರು ಬಹಳಷ್ಟು ಬೆಳೆದು ಬರಲು ಸಾಧ್ಯವಾಯಿತು.' ಎಂದು ಲೋಹಾರ ಅವರು ಅಂದಾನಿಯವರ ಕುರಿತು ಹೀಗೆ ಅಭಿಮಾನದ ಮಾತುಗಳನ್ನಾಡುತ್ತಾರೆ.

ಸರಳ ಮತ್ತು ಶಾಂತ ಸ್ವಭಾವದ ವ್ಯಕ್ತಿತ್ವವುಳ್ಳ ಲೋಹಾರ ಅವರು ಸದಾ ಕೆಲಸ ಮಾಡಲು ವಿದ್ಯಾರ್ಥಿಗಳನ್ನು ಹುರಿದುಂಬಿಸುತ್ತಿದ್ದರು. ಆರೋಗ್ಯವೇ ಭಾಗ್ಯ, ಆರೋಗ್ಯವೊಂದಿದ್ದರೆ ಏನೆಲ್ಲ ಸಾಧಿಸಬಹುದು ಎಂದು ವಿದ್ಯಾರ್ಥಿಗಳಿಗೆ ಕಿವಿಮಾತು ಹೇಳುತ್ತಿದ್ದರು. ಅಲ್ಲದೆ ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ಮಾಡುತ್ತ 'ಕಲಾವಿದರು ರಚಿಸಿರುವ ಕಲಾಕೃತಿಗಳು ಕೇವಲ ಗೋಡೆಯ ಅಲಂಕರಣಕ್ಕೆ ಸೀಮಿತವಾಗಬಾರದು, ಜನರು ನೋಡಿ ಅನುಭವಿಸುವಂತಾಗಬೇಕು. ಇದರಿಂದ ಕಲಾವಿದರು ತಮ್ಮ ತಪ್ಪುಗಳನ್ನು ತಿದ್ದಿಕೊಳ್ಳಲು ಸಾಧ್ಯವಾಗುವುದು ಮತ್ತು ನಮ್ಮ ಚಿತ್ರಕಲೆಗೆ

ಜಾಗತಿಕ ಮಾನ್ಯತೆ ಸಿಗಲೂ ಸಹಕಾರಿಯಾಗುವುದು ಎಂದು ಹೇಳುತ್ತ ಕಲಾಪ್ರದರ್ಶನಗಳನ್ನು ಮಾಡಲು ವಿದ್ಯಾರ್ಥಿಗಳನ್ನು ಹುರಿದುಂಬಿಸುತ್ತಿದ್ದರು. ಮತ್ತು ವಿದ್ಯಾರ್ಥಿಗಳಲ್ಲಿನ ಪ್ರತಿಭೆಯನ್ನು ಗುರುತಿಸುವ ದಿವ್ಯ ದೃಷ್ಟಿ, ಮೆಚ್ಚುವ ಸ್ವಭಾವ ಹೊಂದಿದ್ದರು. ಕಲಾ ವಿದ್ಯಾರ್ಥಿಗಳಿಗೆ ಬಹುಮಾನ, ಗೌರವಗಳೇನಾದರೂ ಬಂದರೆ ತಮಗೇ ಬಂದಂತೆ ಸಂತೋಷಪಡುತ್ತಿದ್ದರು. ಅಂತಹ ಸಹೃದಯ ಗುಣ ಅವರಲ್ಲಿತ್ತು.

ಲೋಹಾರ ಅವರನ್ನು ಕಾಣಲೆಂದು ಚಿತ್ರಕಲಾ ಕ್ಷೇತ್ರದ ಬಗೆಗೆ ತಿಳಿವಳಿಕೆ ಇರುವಂತಹ ಕಲಾ ಪ್ರೇಮಿಗಳು, ಪತ್ರಿಕಾ ವರದಿಗಾರರು ಅಥವಾ ಶಿಕ್ಷಣ ಪ್ರಿಯರು ಯಾರೇ ಬಂದಾಗ ಕ್ಷೇತ್ರದ ಜಟಿಲತೆಗಳನ್ನು, ಕಲಾವಿದರ ಸಮಸ್ಯೆಗಳನ್ನು ಅವರುಗಳ ಮುಂದೆ ಬಿಚ್ಚಿಡುತ್ತಿದ್ದರು; ಮಾತ್ರವಲ್ಲ ಅವುಗಳ ನಿವಾರಣೆಗೆ ಪ್ರಯತ್ನಿಸಲೂ ಮನವಿ ಮಾಡಿಕೊಳ್ಳುತ್ತಿದ್ದರು. ಲೋಹಾರ ಅವರಂತಹ ಕಳಕಳಿಯುಳ್ಳ ಕಲಾವಿದರೆಷ್ಟು ಜನ? 'ನಾನು ಸಾಧಿಸದೇ ಇರುವುದನ್ನು ನನ್ನ ವಿದ್ಯಾರ್ಥಿಗಳಲ್ಲಿ ಯಾರಾದರೂ ಸಾಧಿಸಿದರೆ ಸಾಕು, ಅದುವೇ ನನಗೆ ಗುರುದಕ್ಷಿಣೆ' ಎಂಬ ಆಶಾಭಾವ ಮತ್ತು ಸಂತೃಪ್ತಿ ಅವರಲ್ಲಿತ್ತು. 'ಕಾಸಿಗಾಗಿ ಕಲೆ ಇರಬಾರದು, ಕಲೆಗಾಗಿಯೇ ಕಲೆ ಇರಬೇಕು, ಅದುವೇ ನಿಜವಾದ ಶುದ್ಧ ಕಲೆ' (pure art) ಎಂಬುದು ಲೋಹಾರ ಅವರ ಸ್ಪಷ್ಟ ಕಲಾದೃಷ್ಟಿಯಾಗಿತ್ತು.

## ಕುಟುಂಬ

ಲೋಹಾರ ಅವರದು ಚಿಕ್ಕ ಚೊಕ್ಕ ಕುಟುಂಬ. ಇವರಿಗೆ ಅನುರೂಪಳಾದ ಧರ್ಮಪತ್ನಿ ಶ್ರೀಮತಿ ಅನಸೂಯೆ (ಅಸೂಯೆ ಇಲ್ಲದವಳು) ಇವರ ಕಲಾಬದುಕಿಗೆ ಹೆಗಲುಕೊಟ್ಟು ಮನೆಯ ಆಗು ಹೋಗುಗಳನ್ನು ನೋಡಿಕೊಂಡವರು. ಮಕ್ಕಳಾದ ಸಾಯಿನಾಥ (ಹಿರಿಯ ಮಗ) ಸುನೀಲ್ (ಎರಡನೆಯ ಮಗ) ಮತ್ತು ಅನಿಲ್ (ಮೂರನೆಯ ಮಗ) ಎಲ್ಲರೂ ಸಾಕಷ್ಟು ವಿನಯಶೀಲರು, ಶಿಕ್ಷಣವಂತರೂ ಆಗಿರುವರು. ಕಲಬುರ್ಗಿ ಮಹಾನಗರದ ವಿಶ್ವವಿದ್ಯಾಲಯ ರಸ್ತೆಯಲ್ಲಿರುವ ಓಂ ನಗರದಲ್ಲಿ ಸುಂದರ ಮನೆ ಕಟ್ಟಿಕೊಂಡಿರುವರು. ಕಲಾವಿದನೋರ್ವನ ಕನಸಿನ ಶಿಲ್ಪಕಲಾಕೃತಿಯಂತೆ ಕಾಣುವ ಈ ವಾಸ್ತುಶಿಲ್ಪ ಲೋಹಾರ ಅವರ ಇಷ್ಟದಂತೆ ರಚನೆಯಾದುದು. ಈ ಮನೆಯೆಂಬ ಸ್ಥಾವರದ ಒಳ-ಹೊರ ಗೋಡೆಗಳ ಮೇಲೆ ಜಂಗಮ ಸ್ವರೂಪಿಯಾದ ಕಲಾಕೃತಿಗಳು ಸಾಲಂಕೃತಗೊಂಡಿವೆ. ಮನೆಗೆ ಬರುವ ಕಲಾವಿದರು, ಕಲಾಪ್ರೇಮಿಗಳನ್ನು ಸ್ವಾಗತಿಸಿ ರಸದೌತಣ ನೀಡುತ್ತ ಲೋಹಾರ ಅವರ ಸೃಷ್ಟಿ ದೃಷ್ಟಿಗಳನ್ನು ಪರಿಚಯಿಸುವ ನಿತ್ಯ ಸತ್ಯ ಚೇತನಗಳಾಗಿವೆ.

## ವ್ಯಕ್ತಿತ್ವ

ಉದ್ದಕ್ಕೂ ಸಾತ್ವಿಕ ಬದುಕು ಬದುಕಿದ ಲೋಹಾರ ಅವರ ಬದುಕೊಂದು ತತ್ವ ಅವರು ನಿಭಾಯಿಸಿದ ಉಪನ್ಯಾಸಕ ವೃತ್ತಿಯೇ ಒಂದು ವ್ರತ. ಸದಾ ವಿದ್ಯಾರ್ಥಿಗಳನ್ನು ಬೆಳೆಸುವುದೇ ತಮ್ಮ ಸಂತೃಪ್ತಿ ಎಂದು ಭಾವಿಸಿ ಬದುಕು ಸವೆಸಿದ ಒಬ್ಬ ಅಪರೂಪದ ಕಲಾವಿದ ಮತ್ತು

ವ್ಯಕ್ತಿ. ತಾವು ನಂಬಿದ್ದ ಮೌಲ್ಯಗಳಿಗೆ ಬದ್ಧರಾಗಿ ದಣಿವರಿಯದೆ ದುಡಿದರು. ವಿದ್ಯಾರ್ಥಿಗಳಿಗೆ ಮಾದರಿಯಾದರು. ದಿ ೨೮.೦೨.೨೦೦೭ರಂದು ವೃತ್ತಿಯಿಂದ ವಿಶ್ರಾಂತ ಜೀವನಕ್ಕೆ ಸರಿದ ಅವರು ಮರುವರ್ಷ ಅಂದರೆ ದಿನಾಂಕ: ೦೨.೦೮.೨೦೦೮ರಂದು ಬದುಕಿನಿಂದಲೂ ದೂರ ಸರಿದರು.

## ಕಲಾಸೃಷ್ಟಿ

ಲೋಹಾರ ಅವರು ಸಲ್ಲಿಸಿರುವ ಸೇವೆಯನ್ನು ಸಾಧನೆಯೆಂದು ಪರಿಗಣಿಸುವುದಾದರೆ ಆ ಸಾಧನೆಯನ್ನು ಎರಡು ರೀತಿಯಲ್ಲಿ ಸ್ಪಷ್ಟವಾಗಿ ಗುರುತಿಸಬಹುದು. ಅ) ಚಿತ್ರಕಲಾ ಶಿಕ್ಷಕನಾಗಿ ವಿದ್ಯಾರ್ಥಿಗಳನ್ನು ತರಬೇತುಗೊಳಿಸುವುದೊಂದು ವೃತ್ತಿ ಬದುಕಿನ ಸಾಧನೆಯಾದರೆ, ಇನ್ನೊಂದು ಬ) ಉದ್ದಕ್ಕೂ ಕಲಾಕೃತಿಗಳನ್ನು ರಚಿಸುತ್ತ ಕಲಾಜಗತ್ತಿನಲ್ಲಿ ಒಬ್ಬ ಉತ್ತಮ ಕಲಾವಿದನಾಗಿ ಗುರುತಿಸಿಕೊಂಡಿರುವುದು. ಇದು ಲೋಹಾರ ಅವರು ತಮ್ಮನ್ನು ತಾವು ರೂಪಿಸಿಕೊಂಡಿರುವ ಕಲಾ ವ್ಯಕ್ತಿತ್ವ. ಈ ಇಮ್ಮುಖದ ಸಾಧನೆಗೆ ಬೇಕಾದ ಉತ್ಪತ್ತಿ ಮತ್ತು ಪ್ರತಿಭೆಗಳನ್ನು ಸತತ ಅಭ್ಯಾಸದ ಮೂಲಕ ಪೋಷಿಸಿಕೊಂಡು ಬಂದಿರುವುದು ಅವರ ವಿಶೇಷ. ನಿರಂತರವಾಗಿ ರೇಖಾಚಿತ್ರ, ವರ್ಣಚಿತ್ರಗಳನ್ನು ರಚಿಸುವುದು, ಬೇರೆ ಕಲಾವಿದರ ಕಲಾಕೃತಿಗಳನ್ನು ಮುಕ್ತ ಮನಸ್ಸಿನಿಂದ ವೀಕ್ಷಿಸುವುದು, ವಿದ್ಯಾರ್ಥಿಗಳೊಂದಿಗೆ, ಸಹ ಕಲಾವಿದರೊಂದಿಗೆ ನಿರಂತರವಾಗಿ ಚರ್ಚೆ, ಸಂವಾದಗಳನ್ನು ನಡೆಸುವುದು ಮುಂತಾದ ಚಟುವಟಿಕೆಗಳ ಮೂಲಕ ತಮ್ಮ ಸೃಜನಾತ್ಮಕ ಸಾಮರ್ಥ್ಯವನ್ನು ಬಲಪಡಿಸಿಕೊಂಡಿದ್ದರು.

ಅಧ್ಯಾಪಕ ವೃತ್ತಿಯೊಂದಿಗೆ ಕೆಲಸ ನಿರ್ವಹಿಸಿದರೂ ಆಡಳಿತಾತ್ಮಕವಾದ ಹೆಚ್ಚಿನ ಜವಾಬ್ದಾರಿಗಳನ್ನು ಸಂಸ್ಥೆಯ ಕಾರ್ಯದರ್ಶಿಗಳು ಹಾಗೂ ದೃಶ್ಯಕಲಾ ಮಹಾವಿದ್ಯಾಲಯದ ಪ್ರಾಚಾರ್ಯರೂ ಆಗಿರುವ ಅಂದಾನಿಯವರಿಗೆ ನಿರ್ವಹಿಸಲು ಬಿಟ್ಟು ನಿರುಮ್ಮಳವಾಗಿರುತ್ತಿದ್ದರು, ಹೀಗಾಗಿ ಕಲಾಕೃತಿಗಳನ್ನು ರಚಿಸಲು ಅವರಿಗೆ ಹೆಚ್ಚಿನ ಸಮಯ ದೊರಕಿತೆಂದು ಕಾಣುತ್ತದೆ. ಅಂತೆಯೇ ಅವರ ಕಲಾ ಸೃಷ್ಟಿಯನ್ನು ರೇಖಾಚಿತ್ರಗಳು, ಭಾವಚಿತ್ರಗಳು, ನಿಸರ್ಗಚಿತ್ರಗಳು ಮತ್ತು ಸಂಯೋಜನಾ ಚಿತ್ರಗಳೆಂದು ಒಡೆದು ವಿಶ್ಲೇಷಣೆ, ವಿವೇಚನೆಗಳಿಗೆ ಒಡ್ಡಬಹುದಾಗಿದೆ.

### ರೇಖಾಚಿತ್ರಗಳು :

ಲೋಹಾರ ಅವರ ರೇಖಾಚಿತ್ರಗಳು ಸ್ವಯಂ ಕಲಾಕೃತಿಗಳಾಗಲು ಬಯಸುತ್ತವೆ. ಆದರೆ ಅದಕ್ಕೆ ಬೇಕಾದ ಶಕ್ತಿ ಮತ್ತು ಸತ್ವಗಳಿಲ್ಲದೆ ಸೊರಗುತ್ತವೆ. ಅವು ಒಂದು ಆಕಾರವನ್ನು ಸೂಚಿಸುವ ರೇಖಾಕೃತಿಯಾಗಿಯೇನೋ ಕಾಣುತ್ತದೆ. ಆದರೆ ಅರ್ಥಪೂರ್ಣ ಕೃತಿಗಳಾಗಿ ಅನುಭವಕ್ಕೆ ದಕ್ಕುವಲ್ಲಿ ಹಿಂಜರಿಯುತ್ತವೆ. ಬದಲಾಗಿ ಆ ರೇಖೆಗಳಿಗೆ ಸೂಕ್ಷ್ಮವಾದ ಲಾಲಿತ್ಯವಿದೆ. ಲಯ ಗತಿಗಳಿವೆ. ಕಡಿಮೆ ಗೆರೆಗಳಲ್ಲಿ ಆಕಾರ ಸೂಚಿಸುವ ಯತ್ನವೂ ಕಂಡುಬರುತ್ತದೆ. ಕೆಲವು ರೇಖಾಚಿತ್ರಗಳಲ್ಲಿ ಅಲ್ಲಲ್ಲಿ ರೇಖೆಗಳು ಅದೃಶ್ಯವಾಗಿಯೂ ಅನುಭವಕ್ಕೆ ದಕ್ಕುತ್ತವೆ. ಇಂತಹ ರೇಖಾಚಿತ್ರಗಳಲ್ಲಿ ಲೋಹಾರ ಅವರ ಮಾಗಿದ ಪ್ರಬುದ್ಧತೆ ಅರಿವಿಗೆ ದಕ್ಕುತ್ತದೆ. ಉಳಿದಂತೆ

ಕೆಲವೊಮ್ಮೆ ರೇಖೆಗಳು ದಟ್ಟಣೆಗೊಂಡು ಒಂದನ್ನೊಂದು ಸ್ಪರ್ಶಿಸಿ ಒಂದರ ಮೇಲೊಂದು ಹಾಯ್ದು ಏಕವರ್ಣಚಿತ್ರವಾಗಿ ಗೋಚರಿಸಿವೆ.

ಕಲಾವಿದ ಲೋಹಾರ ಅವರಿಗೆ ಆರಂಭದಿಂದಲೂ ರೇಖಾಚಿತ್ರ ರಚಿಸುವುದರಲ್ಲಿ ಅಭಿರುಚಿಯಿದ್ದಿತು. ಎ.ಎ.ಆಲಮೇಲಕರ್, ಎಂ. ಎಫ್.ಹುಸೇನ್ ಅವರಂತಹ ಕಲಾವಿದರ ರೇಖಾಚಿತ್ರಗಳಿಂದ ಇವರು ಸಾಕಷ್ಟು ಪ್ರಭಾವಗೊಂಡಿದ್ದರೂ ರೇಖಾಚಿತ್ರಕಲೆಯನ್ನು ಒಂದು ಸ್ವತಂತ್ರ ಕಲಾಕೃತಿಯಾಗಿ ಮಾಡಿ ನೀಡುವ ಮಟ್ಟಕ್ಕೆ ಲೋಹಾರ ಅವರ ಪ್ರತಿಭೆ ವಿಸ್ತರಿಸಿಕೊಂಡುದು ಎಲ್ಲೂ ಕಂಡುಬರುವುದಿಲ್ಲ. ಆದರೆ ಅವರ ಕೌಶಲ ಮೆಚ್ಚುವಂತಹುದು. 'ರೇಖಾಚಿತ್ರಗಳು ಮನುಷ್ಯನ ದೇಹದ ಅಸ್ತಿಪಂಜರವಿದ್ದಂತೆ,ಅದು ಗಟ್ಟಿಯಾಗಿದ್ದರೆ ಮನುಷ್ಯ ಸದೃಢನಾಗಿರಬಲ್ಲ; ಹಾಗೆಯೇ ಚಿತ್ರಕಲೆಯಲ್ಲಿ ರೇಖಾಚಿತ್ರವು ಬಹುಮುಖ್ಯ ಪಾತ್ರವಹಿಸುತ್ತದೆ' ಎಂದು ಲೋಹಾರರು ಹೇಳಿರುವರಾದರೂ ಅವರ ವರ್ಣಚಿತ್ರಗಳಿಗೆ ಹೋಲಿಸಿದರೆ ರೇಖಾಚಿತ್ರಗಳು ಪ್ರಮಾಣದಲ್ಲಿ ಮಾತ್ರವಲ್ಲ ಪರಿಣಾಮ, ಶೈಲಿ, ತಂತ್ರ ಮತ್ತು ಸತ್ವಗಳಿಂದಲೂ ಗೌಣವೆನಿಸುತ್ತವೆ. ಆದರೆ ಅವರ ಬಹುಪಾಲು ವರ್ಣಚಿತ್ರಗಳನ್ನು ರೇಖಾಚಿತ್ರಗಳೇ ಆಳುತ್ತವೆಯೆಂಬುದು ಆಶ್ಚರ್ಯವನ್ನುಂಟುಮಾಡುತ್ತದೆ.

ರೇಖಾಚಿತ್ರಗಳನ್ನು ಪೆನ್ನಿನಿಂದ, ಕ್ವಚಿತ್ತಾಗಿ ಕುಂಚದಿಂದ ರಚಿಸುವುದು ಅವರ ತಂತ್ರ. ಲಭ್ಯ ಕೆಲವೇ ರೇಖಾಚಿತ್ರಗಳಲ್ಲಿ ಮಾನವೀಯ ಕಾಳಜಿ ತುಂಬಿ ತುಳುಕಿದೆ. ಅವ್ಯಕ್ತ ಭಯ, ಆತಂಕಗಳು ನಿರೂಪಣೆಗೊಂಡಿವೆ. ಹೆಚ್ಚಿನವು ಸಾಮಾನ್ಯ ನೆಲೆಯವು. ಮಾನವಾಕೃತಿಗಳು ಪ್ರಧಾನವಾಗಿರುವ ಅವರ ಈ ಚಿತ್ರಗಳಲ್ಲಿ ಕ್ವಚಿತ್ತಾಗಿ ಪ್ರಾಣಿ, ಪಕ್ಷಿಗಳು ಚಿತ್ರಿತಗೊಂಡು ಅವರ ಕಲಾ ಕೌಶಲ ಮತ್ತು ಪರಿಸರ ಪ್ರೇಮಕ್ಕೆ ಕನ್ನಡಿ ಹಿಡಿದಿರುತ್ತವೆ.

## ನಿಸರ್ಗ ಚಿತ್ರಗಳು

ಲೋಹಾರ ಅವರು ನೂರಾರು ನಿಸರ್ಗ ಚಿತ್ರಗಳನ್ನು ರಚಿಸಿರುವರು. ಆದರೆ ಅದರಲ್ಲೇ ತನ್ಮಯತೆಯನ್ನು ಅನುಭವಿಸಿದವರಲ್ಲವೆಂಬುದು ಮೇಲ್ನೋಟದಲ್ಲೇ ಕಂಡುಬರುತ್ತದೆ. ನಿಸರ್ಗಚಿತ್ರ ರಚನೆಯೆಂಬುದು ವರ್ಣಚಿತ್ರ ಸಂಯೋಜನೆಗೆ ಮೂಲ ಮತ್ತು ಸಹಾಯಕವೆಂಬುದಾಗಿ ಅವರು ಭಾವಿಸಿದ್ದಂತೆ ಗೋಚರವಾಗುತ್ತದೆ. ಹಾಗಾಗಿ ಅವರ ನಿಸರ್ಗ ಚಿತ್ರಗಳು ಆಸ್ವಾದಕರ ಹೃದಯಗಳನ್ನು ಸಂಪೂರ್ಣವಾಗಿ ಆವರಿಸುವಲ್ಲಿ ಸೋಲನ್ನು ಅನುಭವಿಸುತ್ತವೆ. ನಿಸರ್ಗ ಚಿತ್ರ, ಭಾವಚಿತ್ರಗಳಲ್ಲಿ ಏಕಮೇವಾದ್ವಿತೀಯವೆನಿಸಿರುವ ಗುರು ಖಂಡೇರಾವರೇ ತಮ್ಮ ನಿಸರ್ಗ ಚಿತ್ರಗಳಿಗೆ ಮೂಲ ಪ್ರೇರಣೆ ಎಂದು ತಾವೇ ಹೇಳಿಕೊಂಡಿರುವರಾದರೂ ಅವರ ಶೈಲಿಯ ದಟ್ಟ ಪ್ರಭಾವ ಇವರ ಚಿತ್ರಗಳಲ್ಲಿ ಕಂಡುಬರುವುದಿಲ್ಲ. ಆದರೆ ವಸ್ತುವಿನ ಆಯ್ಕೆಯ ಸಂದರ್ಭದಲ್ಲಿ ಅಲ್ಲಲ್ಲಿ ಒಂದಷ್ಟು ಗುರುಗಳ ಪ್ರಭಾವದ ಎಳೆಗಳು ಕಾಣಿಸುತ್ತವೆ ಅಷ್ಟೆ.

ನಿಸರ್ಗ ಚಿತ್ರಣಕ್ಕೆ ಭೂದೃಶ್ಯಗಳನ್ನು ಆಯ್ಕೆ ಮಾಡಿಕೊಳ್ಳುವಲ್ಲಿ ಲೋಹಾರ ಅವರು ತಮ್ಮ ವಿಶೇಷತೆಯನ್ನು ಮೆರೆಯುತ್ತಾರೆ. ಅವರು ಪ್ರಕೃತಿಯ ಬೆಟ್ಟ, ಗುಡ್ಡ, ಹೊಲ ಗದ್ದೆ, ಊರು

ಕೇರಿಗಳು ಏನೇ ಇರಲಿ ಸಾಮಾನ್ಯವಾಗಿ ಅವುಗಳನ್ನು ಬಿಡಿ ಬಿಡಿಯಾಗಿ ನೋಡುವುದಿಲ್ಲ. ಬದಲಾಗಿ ಅವೆಲ್ಲವುಗಳನ್ನು ಒಟ್ಟಾಗಿ ದೂರದಿಂದಲೇ ನಿರೀಕ್ಷಿಸಿ ಅಸ್ವಾದಿಸಿದಂತೆ ಸೆರೆಹಿಡಿದಿರುವರು.

ತಮ್ಮ ಗತಕಾಲದ ಸೌಂದರ್ಯವನ್ನು ಸೂಸುತ್ತ ಶತ ಶತಮಾನಗಳಿಂದ ನಿಂತಿರುವ ಐತಿಹಾಸಿಕ ಸ್ಥಳಗಳೂ ಇವರ ರಚನೆಗಳಲ್ಲಿ ರಾರಾಜಿಸಿವೆ. ಬಾದಾಮಿಯ ದೃಶ್ಯ, ಐಹೊಳೆಯ ದೇವಾಲಯಗಳ ನೋಟ, ಪಟ್ಟದಕಲ್ಲಿನ ಭೂದೃಶ್ಯಗಳು, ಕಲಬುರ್ಗಿಯ ಪ್ರಾಚೀನ ಕಟ್ಟಡಗಳು ಮೊದಲಾದವುಗಳ ಕುರಿತು ರಚಿಸಿದ ದೃಶ್ಯಗಳಲ್ಲಿ ಅವರು ಯಾವುದೇ ಒಂದು ಕಟ್ಟಡ ಅಥವಾ ಅದರ ಯಾವುದೇ ಒಂದು ಭಾಗವನ್ನು ಆಯ್ದುಕೊಂಡು ಅದರ ವಿವರಗಳನ್ನು ಚಿತ್ರಿಸುವೆಡೆಗೆ ಆಸಕ್ತಿ ತೋರಿರುವುದು ಕಾಣುವುದಿಲ್ಲ. ಬದಲಾಗಿ ಆ ಕಟ್ಟಡ ಅಥವಾ ಕಟ್ಟಡ ಸಮುಚ್ಚಯವನ್ನು ದೂರದಿಂದಲೇ ಅವಲೋಕಿಸಿ ಕಣ್ಣಿಗೆ ಗೋಚರಿಸಿದಂತೆ, ಯಥಾವತ್ತಾಗಿ ಚಿತ್ರಿಸುವೆಡೆಗೆ ಗಮನಹರಿಸಿದ್ದಾರೆ. ಇಂತಹ ಐತಿಹಾಸಿಕ ಸ್ಮಾರಕಗಳ ಬಹುತೇಕ ಭೂದೃಶ್ಯಗಳನ್ನವರು ಆಗಾಗ ವಿದ್ಯಾರ್ಥಿಗಳೊಟ್ಟಿಗೆ ಪ್ರವಾಸ ಕೈಗೊಂಡಾಗಿನ ಸಂದರ್ಭದಲ್ಲಿ ವಿದ್ಯಾರ್ಥಿಗಳಿಗೆ ತಿಳಿಸುವುದಕ್ಕೋಸ್ಕರ ರಚಿಸಿದವುಗಳಾಗಿವೆ. ಬಹುತೇಕ ಜಲವರ್ಣ ಮಾಧ್ಯಮದ ಈ ಚಿತ್ರಗಳಲ್ಲಿ ಸೂಕ್ಷ್ಮ ವಿವರಗಳೆಲ್ಲ ಸೂಚ್ಯವಾಗಿ ವ್ಯಕ್ತವಾಗಿವೆ. ಏನಿದ್ದರೂ ಭವ್ಯತೆ, ರಮ್ಯತೆ, ಮತ್ತು ಭಾವತೀವ್ರತೆಗಳಿಗೇ ಒತ್ತು ನೀಡಲಾಗಿದೆ. ಸಣ್ಣ ಸಣ್ಣ ಪಟ್ಟಿಕೆಯಂತಹ ಬಣ್ಣಗಳ ಬೀಸುಗಳ ಮೂಲಕ ವ್ಯಕ್ತಗೊಂಡ ನೆರಳು ಬೆಳಕಿನ ಛಾಯಾ ಮೌಲ್ಯ, ಸೂರ್ಯ ಪ್ರಕಾಶವು ನೈಸರ್ಗಿಕ ಬೆಟ್ಟ ಗುಡ್ಡಗಳು ಇಲ್ಲವೆ ಸುಂದರ ಹಾಗೂ ಬೃಹತ್ ಕಟ್ಟಡಗಳ ಮಗ್ಗುಲುಗಳಿಗೆ ಸ್ಪರ್ಶಿಸಿದಂತಹ ಮನೋಹರವಾದ ದೃಶ್ಯಾನುಭವ ನೀಡುವಂತವುಗಳಾಗಿ ಮೂಡಿಬಂದಿವೆ. ಅವರ ಎಲ್ಲ ಭೂದೃಶ್ಯ ಚಿತ್ರಗಳಲ್ಲಿ ಆಕೃತಿಗಳ ಸಮೀಪ ದೂರಗಳ ಯಥಾದರ್ಶನ, ಬಣ್ಣಗಳ ಛಾಯಾಂತರಗಳು ನೋಟಕ್ಕೆ ಹಿತಕರ ಅನುಭವ ನೀಡುವಂತಹವುಗಳಾಗಿವೆ.

**ಭಾವಚಿತ್ರಗಳು**

ಲೋಹಾರ ಅವರು ಕಲಾಕೃತಿಗಳ ರಚನೆಯನ್ನು ಒಂದು ವ್ರತದಂತೆ ನಡೆಸಿಕೊಂಡು ಬಂದವರು. ಚಿತ್ರಿಸುವುದು ಅವರ ದೈನಂದಿನ ಚಟುವಟಿಕೆಯ ಒಂದು ಭಾಗವಾಗಿದ್ದಿತು. ನಿಸರ್ಗಚಿತ್ರ, ಸಂಯೋಜನಾ ಚಿತ್ರಗಳೊಂದಿಗೆ ಭಾವಚಿತ್ರಗಳನ್ನು ನಿರಂತರವಾಗಿ ರಚಿಸುವುದು ಒಂದು ಬಗೆಯಲ್ಲಿ ದಿನಚರಿಯಾಗಿತ್ತು. ಭಾವಚಿತ್ರಗಳನ್ನು ರಚಿಸುವ ಗೀಳಂತೂ ಹುಡುಗನಾಗಿದ್ದಾಗಲೇ ತಮ್ಮೂರಿನಲ್ಲಿ ಒಪ್ಪಿತ ಭಾವಚಿತ್ರಗಳನ್ನು ರಚಿಸಲು ಆರಂಭಿಸಿದ್ದ ದಿನದಿಂದಲೇ ಅಂಟಿಕೊಂಡುದ್ದಾಗಿದ್ದಿತು. ಆದರೆ ಚಿತ್ರಕಲಾ ಶಿಕ್ಷಣಾರ್ಥಿಯಾಗಿ ಗುಲಬರ್ಗಾಕ್ಕೆ ಬಂದ ಮೇಲೆ ಅವರ ಭಾವಚಿತ್ರ ರಚನೆಗೊಂದು ಸ್ಪಷ್ಟ ಆಯಾಮ ದೊರಕಿತು.

ಹಾಗೆ ನೋಡಿದರೆ ಗುಲಬರ್ಗಾ ಭಾಗದಲ್ಲಿ ಭಾವಚಿತ್ರ ಕಲಾವಿದರ ಬಹು ದೊಡ್ಡ ಪರಂಪರೆಯೇ ಇದೆ. ಶಾಂತಲಿಂಗಪ್ಪ ಪಾಟೀಲ. ಶಂಕರರಾವ್ ಆಳಂದಕರ, ಎಸ್.ಎಂ.

ಪಂಡಿತ್, ಜೆ.ಎಸ್. ಖಂಡೇರಾವ್ ಮೊದಲಾದವರು ಈ ಪರಂಪರೆಯಲ್ಲಿ ಎದ್ದು ಕಾಣುವ ಕುಶಲಿಗಳು. ತಮ್ಮ ಭಾವಚಿತ್ರಗಳಲ್ಲಿ ಗುರು ಖಂಡೇರಾವ್ ಅವರ ದಟ್ಟ ಪ್ರಭಾವ ಇದೆ ಎಂದು ಲೋಹಾರ ಅವರು ಹೇಳಿಕೊಂಡಿರುವರಾದರೂ ಗುರುವಿನ ಭಾವಚಿತ್ರಗಳಲ್ಲಿನ ನಾವೀನ್ಯತೆ, ಸಮ್ಮೋಹಕ ಗುಣ ಇವರ ಭಾವಚಿತ್ರಗಳಲ್ಲಿ ಕಾಣುವುದು ಕಷ್ಟ. ಹಲವಾರು ಭಾವಚಿತ್ರ, ವ್ಯಕ್ತಿಚಿತ್ರಗಳನ್ನು ರಚಿಸಿರುವ ಲೋಹಾರ ಅವರು ಅವುಗಳಲ್ಲಿ ತಮ್ಮದೇ ಆದ ವಿಶಿಷ್ಟ ಛಾಪು ಮೂಡಿಸಲು ಹೊರಟವರೇನಲ್ಲ. ಒಪ್ಪಿತ ಭಾವಚಿತ್ರಗಳನ್ನು ಬಿಟ್ಟರೆ ಪ್ರಾತ್ಯಕ್ಷಿಕೆಯ ಸಂದರ್ಭಗಳಲ್ಲಿ ರಚಿಸಿದ ಭಾವಚಿತ್ರಗಳು ತಕ್ಕ ಮಟ್ಟಿಗೆ ಗಮನ ಸೆಳೆಯುತ್ತವೆ. ಇಂತಹ ಸನ್ನಿವೇಶಗಳಲ್ಲಿ ಅವರು ವೇಗವಾಗಿ, ಅಲ್ಪಾವಧಿಯಲ್ಲಿ ರಚಿಸಿರುವುದು ವಿಶೇಷ. ವಿದ್ಯಾರ್ಥಿಗಳ ಕಲಿಕೆಗೂ ಸಹಾಯಕವಾಗಬೇಕೆಂಬ ಉದ್ದೇಶ ಇದರ ಹಿಂದೆ ಇರುವುದರಿಂದ ಅವರ ಸಮ್ಮುಖದಲ್ಲಿ ವೇಗದ ರಚನೆ ಸೂಕ್ತವೂ ಹೌದು. ಯಾವುದೇ ಭಾವಚಿತ್ರಗಳಲ್ಲಿ ಅವರು ಹಿನ್ನೆಲೆಯನ್ನು ವಿವರ ಪೂರ್ಣವಾಗಿ ಚಿತ್ರಿಸುವುದಿಲ್ಲ. ಕೆಲವೊಂದರಲ್ಲಿ ಅಸ್ಪಷ್ಟವಾದ ವರ್ಣಛಾಯೆಗಳ ಬೀಸುಗಳುಂಟು. ಭಾವಚಿತ್ರಗಳ ರಚನೆಯಲ್ಲಿ ಹಿನ್ನೆಲೆ ಮತ್ತು ಉಡುಪಿನ ಬಣ್ಣಗಳ ಪ್ರತಿಫಲನ ಮುಖದ ಮೇಲೆ ಆಗುವುದರಿಂದ ಭಾವ ಮತ್ತು ಬಣ್ಣಗಳಲ್ಲಿ ವ್ಯತ್ಯಯವಾಗುತ್ತವೆ. ಕಣ್ಣಿನ ಕಾಂತಿ ಮತ್ತು ಬೆಳಕುಗಳೂ ವ್ಯಕ್ತವಾಗುತ್ತವೆ. ಜಿಲ್ಲಾಧಿಕಾರಿಯೊಬ್ಬರ ಭಾವಚಿತ್ರಣದಲ್ಲಿ ಕಪ್ಪು, ನೀಲಿ ಉಡುಪಿನ ವಿರುದ್ಧವಾಗಿ ಉಜ್ವಲ, ಪಾರದರ್ಶಕ ವರ್ಣಗಳಿಗೆ ಪ್ರಾಧಾನ್ಯತೆ ನೀಡಿರುವರು. ಯಾವುದೇ ಆಕೃತಿಗಳಲ್ಲಿ ಮುಖಗಳ ಸೂಕ್ಷ್ಮ ವಿವರಕ್ಕೆ ಇವರು ವಿಶೇಷ ಗಮನ ಕೊಡುವುದಿಲ್ಲ.

ಭಾವಚಿತ್ರಗಳ ರಚನೆಯಲ್ಲಿ ರೂಪದರ್ಶಿಗಳ ನೆಟ್ಟ ನೋಟದ ಬಗೆಗೆ ಕಲಾ ವಲಯದಲ್ಲಿ ಜಿಜ್ಞಾಸೆ ಇದೆ. ಬಹುಪಾಲು ಕಲಾವಿದರು ರೂಪದರ್ಶಿ ಮತ್ತು ಕಲಾವಿದ ಈರ್ವರೂ ಮುಖಾಮುಖಿಯಾದಂತೆ, ನೇರ ಸಂವಾದ ಅಥವಾ ಸಂಬಂಧ ಪಡೆದಂತೆ ಚಿತ್ರಿಸುವುದು ಸಾಮಾನ್ಯ. ಆದರೆ ಲೋಹಾರ ಅವರಲ್ಲಿ ಇದು ವ್ಯತಿರಿಕ್ತವಾಗಿದೆ. ಅವರ ಬಹುಪಾಲು ಭಾವಚಿತ್ರಗಳಲ್ಲಿ ವ್ಯಕ್ತಿಗಳು ಎತ್ತಲೋ ನೋಡುತ್ತಿರುವಂತೆ ಚಿತ್ರಿಸಿರುವುದನ್ನು ಕಾಣುತ್ತೇವೆ. 'ವ್ಯಕ್ತಿಗಳ ಮುಖಗಳನ್ನು ಯಥಾವತ್ ಚಿತ್ರಿಸುವುದು ಮುಖ್ಯವಲ್ಲ, ಆ ವ್ಯಕ್ತಿಗಳ ಸ್ವಭಾವಗಳನ್ನು, ವ್ಯಕ್ತಿತ್ವಗಳನ್ನು ಮೂಡಿಸುವ ಪ್ರಯತ್ನವಾಗಬೇಕು' ಎಂದು ಹೇಳುತ್ತಿದ್ದ ಲೋಹಾರ ಅವರ ಅಭಿಪ್ರಾಯಗಳು ಮೇಲಿನ ಮಾತುಗಳಿಗೆ ಪುಷ್ಟಿಯನ್ನೊದಗಿಸುತ್ತವೆ. ಆದರೆ ಇದರಿಂದ ವ್ಯಕ್ತಿಗಳ ವ್ಯಕ್ತಿತ್ವದ ಆಳಕ್ಕೆ ಇಳಿಯುವ, ಬದಕುವ ಆತ್ಮೀಯ ಗುಣಕ್ಕಿಂತ ಬಾಹ್ಯ ಲಕ್ಷಣಗಳಿಗೇ ಒತ್ತು ನೀಡಿದಂತೆ ಆಗುತ್ತದೆ. ಲೋಹಾರರು ವ್ಯಕ್ತಿಚಿತ್ರ, ಭಾವಚಿತ್ರಗಳನ್ನೇ ತಮ್ಮ ವೈಶಿಷ್ಟ್ಯವಾಗಿಸಿಕೊಂಡಿಲ್ಲವಾದ ಕಾರಣ ಅಂತಹ ಆಪ್ತವೆನಿಸುವ ಆತ್ಮೀಯ ಗುಣಗಳನ್ನು ಅವರಲ್ಲಿ ಅರಸಬೇಕಾಗಿಲ್ಲ. ಆದರೂ ಅವರಲ್ಲಿನ ಸೂಕ್ಷ್ಮ ಸಂವೇದನಾ ಗುಣ ಮತ್ತು ತಂತ್ರಗಳು ಅವರ ಭಾವಚಿತ್ರಗಳಲ್ಲಿ ಅನುಭವಕ್ಕೆ ಬರದೇ ಇರದು.

ಮಕ್ಕಳಿಗೆ ಕಲಿಸುವ ಪ್ರಾಯೋಗಿಕ ಪಾಠಗಳಲ್ಲಿ ಭಾವಚಿತ್ರ ರಚನೆಯೂ ಒಂದು

ಭಾಗವಾಗಿದ್ದರಿಂದ ಲೋಹಾರರು ಭಾವಚಿತ್ರ ರಚನೆಯ ನಿರಂತರತೆಯನ್ನು ಇರಿಸಿಕೊಂಡಿದ್ದರು, ಮಾತ್ರವಲ್ಲ ಉದ್ದೇಶಿತವಾಗಿಯೂ ಕೆಲವು ಪ್ರಮುಖ ವ್ಯಕ್ತಿಗಳನ್ನು ರೂಪದರ್ಶಿಗಳಾಗಿಸಿ ಚಿತ್ರಿಸಿರುವುದು ವಿಶೇಷ. ಬಣ್ಣಗಳ ಮೇಳ, ಛಾಯೆ ಮತ್ತು ಬೀಸುಗಳು ಅನೇಕ ಅಂಶಗಳಲ್ಲಿ ಖಂಡೇರಾವ್ ಅವರ ಭಾವಚಿತ್ರ ರಚನಾಕ್ರಮದಿಂದ ಪ್ರಭಾವಿತವಾದವುಗಳಾಗಿವೆ. ರೂಪದರ್ಶಿಗಳನ್ನು ಮುಂದಿರಿಸಿಕೊಂಡು ಅಲ್ಪಾವಧಿಯಲ್ಲಿ ಚಿತ್ರಿಸುವಾಗ ರೂಪಕ್ಕಿಂತ ಭಾವಕ್ಕೆ ಪ್ರಾಧಾನ್ಯತೆ ದೊರೆತಿರುವುದು ಕೆಲವು ಚಿತ್ರಗಳಲ್ಲಿ ಕಂಡುಬರುತ್ತದೆ. ಮುಖದ ಮೇಲೆ ಹರಡಿದ ಬೆಳಕಿನ ಪರಿಣಾಮ, ವರ್ಣ ವ್ಯತ್ಯಾಸಗಳನ್ನು ದಾಖಲಿಸುವಾಗ ವಿವರಕ್ಕೆ ಹೋಗದೇ ಅನುಭವಕ್ಕೇ ಬಿಟ್ಟುಕೊಡುವ ಕ್ರಮ ಕೆಲವು ಭಾವಚಿತ್ರಗಳಲ್ಲಿ ವಿಶೇಷವೆನಿಸುತ್ತದೆ. ಎಲ್ಲೂ ಒರಟು,ದೊಗರು ಮೈವಳಿಕೆಗಳ ರಚನೆಗೆ ಇಂಬುಗೊಡದೆ ನಯ, ನುಣುಪು ಬೀಸುಗಳ ಕಡೆಗೇ ಹೆಚ್ಚಿನ ಒಲವು ತೋರಿರುವುದು ಸ್ಪಷ್ಟ.

ರೂಪದರ್ಶಿಗಳ ಆಯ್ಕೆಯಲ್ಲೂ ವೈವಿಧ್ಯತೆ ಕಾಣಬಹುದು. ಸಮಾಜದ ವಿವಿಧ ಧರ್ಮ, ಸಂಸ್ಕೃತಿ, ಸಂಸ್ಕಾರಗಳ ಹಿನ್ನೆಲೆಯಿಂದ ಬಂದ ಸ್ತ್ರೀ, ಪುರುಷರು ಅವರ ವೇಷ-ಭೂಷಣಗಳನ್ನು ಬಿಂಬಿಸುವ ಅವರ ಈ ಚಿತ್ರಗಳು ಸಂಸ್ಕೃತಿಯ ದಾಖಲೆಗಳಾಗಿಯೂ ಉಳಿಯಬಲ್ಲ ಪ್ರಾಮುಖ್ಯತೆ ಪಡೆಯಬಲ್ಲವುಗಳಾಗಿವೆ. ಅನೇಕ ವಿದ್ಯಾರ್ಥಿ, ವಿದ್ಯಾರ್ಥಿನಿಯರು, ಮಕ್ಕಳು, ಸ್ವಾಮೀಜಿಗಳು, ಪುಣ್ಯಪುರುಷರು, ಅಧಿಕಾರಿಗಳು ಹೀಗೆ ಮೊದಲಾದವರ ಭಾವಚಿತ್ರಗಳು ಈ ಮಾತುಗಳಿಗೆ ನಿದರ್ಶನಗಳಾಗುತ್ತವೆ.

## ಸಂಯೋಜನಾ ಚಿತ್ರಗಳು :

ಲೋಹಾರ ಅವರ ಸಂಯೋಜನ ಚಿತ್ರಗಳ ರಾಶಿ ಅಪಾರ ಮತ್ತು ಅಷ್ಟೇ ವೈವಿಧ್ಯಮಯ. ಬಡತನ ಸಿರಿತನಗಳ ಕುರಿತೇ ಇರಲಿ ಅಥವಾ ತಾವು ವಾಸವಾಗಿರುವ ಪ್ರದೇಶದ ಬಿಸಿಲು, ಬರಗಾಲ, ಪ್ರಕೃತಿ ಸೌಂದರ್ಯಕ್ಕೆ ಸ್ಪಂದಿಸಿದುದೇ ಆಗಿರಲಿ, ಇಲ್ಲವೆ ನಾಡಿನ ದೇಶದ ಜ್ವಲಂತ ಸಮಸ್ಯೆಗಳಿಗೆ ಪಡಿಮಿಡಿದುದೇ ಆಗಿರಲಿ, ಎಲ್ಲವನ್ನೂ ರಮ್ಯವಾಗಿಯೇ ವಿವರಿಸುವ ಗುಣ ಅವರ ಚಿತ್ರಗಳದ್ದು. ಮುಖ್ಯವಾಗಿ ಬಣ್ಣಗಳ ವೈವಿಧ್ಯತೆ ಮತ್ತು ಸಮೃದ್ಧತೆ, ಆಕೃತಿಗಳ ವಕ್ರತೆ, ರಭಸ, ರಾಶಿ, ತೆರಪುಗಳು ಮತ್ತು ಪುನರಾವರ್ತನೆ ಇಂತಹ ಅಂಶಗಳಿಂದಾಗಿ ಅವರ ಕಲಾಕೃತಿಗಳು ನೋಡುವ ಕಣ್ಣುಗಳಿಗೆ, ಕಾಣುವ ಮನಸ್ಸುಗಳಿಗೆ ಹಬ್ಬವನ್ನುಂಟುಮಾಡುತ್ತವೆ.

ಪ್ರಕೃತಿ ಸೌಂದರ್ಯದಿಂದ ವಂಚಿತವಾಗಿರುವ ಪ್ರದೇಶದಲ್ಲಿದ್ದರೂ ಲೋಹಾರರು ಪ್ರಕೃತಿಗೆ ಪಡಿಮಿಡಿದಿರುವುದು ಆಶ್ಚರ್ಯ ಹುಟ್ಟಿಸಿದರೂ ದೃಶ್ಯಸತ್ಯ. ಮೂರ್‍ನಾಲ್ಕು ದಶಕಗಳ ದೀರ್ಘ ಕಾಲ ಖಂಡೇರಾವ್, ಅಂದಾನಿ, ಉಪ್ಪಿನ್, ಮೊದಲಾದವರೊಂದಿಗೆ ಬೆರೆತು ಚಿತ್ರಿಸುತ್ತ ಬಂದಿದ್ದರೂ ಅವರುಗಳ ಕಲಾಕೃತಿಗಳಲ್ಲಿ ಕಾಣದ ವರ್ಣಸಮೃದ್ಧಿ ಇವರ ಕಲಾಕೃತಿಗಳಲ್ಲಿದೆ. ಎಷ್ಟೋ ಕಲಾಕೃತಿಗಳಲ್ಲಿ ಅವರು ಆಯ್ದುಕೊಳ್ಳುವ ವಸ್ತುವಿಗೂ ಬಳಸಿದ ವರ್ಣಗಳಿಗೂ ತಾಳಮೇಳ ಕಂಡುಬರುವುದಿಲ್ಲ. ಮೈವಳಿಕೆಯೂ ಅಷ್ಟೇ. ಹೀಗಾಗಿ ಅನೇಕ ವೇಳೆ ಸರಳತೆ ಕಡೆಗೆ ಕರೆದೊಯ್ಯದೆ ಹಂದಕ್ಕೆಳೆಯುತ್ತವೆ.

ಕ್ಯಾನ್‌ವಾಸಿನ ಇಡೀ ಅವಕಾಶವನ್ನು ಒಂದಿಂಚೂ ಬಿಡದೇ ಆವರಿಸಿಕೊಳ್ಳುವಂತೆ ಚಿತ್ರಿಸುವ ಇವರು ಅವಕಾಶದ ಮೇಲೆ ತಮ್ಮ ಕಲ್ಪನೆಯ ರೂಪಾಕಾರಗಳನ್ನು ಮೊದಲು ರೇಖಾತ್ಮಕವಾಗಿ ಮೂಡಿಸಿಕೊಳ್ಳುವರು. ಇದು ಮೊದಲ ಹಂತ. ಬಳಿಕ ಇತ್ಯಾತ್ಮಕ (Positive) ಮತ್ತು ನೇತ್ಯಾತ್ಮಕ (Negative) ಅವಕಾಶಗಳಲ್ಲಿ ವಿವಿಧ ಬಣ್ಣಗಳನ್ನು ಶೀಘ್ರವಾಗಿ ಕುಂಚವನ್ನು ಹರಿದಾಡಿಸಿ ತುಂಬಿ ಬಿಡುತ್ತಾರೆ. ಇಷ್ಟಕ್ಕೆ ಕಲಾಕೃತಿ ಪೂರ್ಣವಾಯಿತೆಂದು ನಾವು ಅಂದುಕೊಳ್ಳುತ್ತೇವೆ. ಲೋಹಾರರ ಪ್ರಕಾರ ಅದಿನ್ನೂ ಅಪೂರ್ಣವೇ. ಅವಕಾಶದಲ್ಲಿ ತುಂಬಿರುವ ಬಣ್ಣಗಳ ಮೇಲೆ ಆಯಾ ಬಣ್ಣಗಳದ್ದೇ ಗಾಢ ಅಥವಾ ತೆಳುವಾದ ತುಂಡು ತುಂಡಾದ ಅಡ್ಡ ರೇಖೆ, ಗಿಡ್ಡರೇಖೆ, ಸಣ್ಣ ದಪ್ಪ ರೇಖೆಗಳನ್ನು ಕುಂಚದಿಂದ ಕೊರೆದು ಪೂರ್ಣಗೊಳಿಸುವ ಅವರ ಈ ತಂತ್ರ ಬಹಳ ಸೊಗಸು. ಬಹುಪಾಲು ಕಲಾಕೃತಿಗಳು ಈ ತಂತ್ರಗಳನ್ನೇ ಆಳವಡಿಸಿಕೊಂಡು ವಿಶಿಷ್ಟ ದೃಶ್ಯಾನುಭವ ನೀಡುವಲ್ಲಿ ಸಫಲವಾಗಿವೆ. ಈ ತಂತ್ರ ತಮ್ಮ ಸ್ವಯಂ ಅನ್ವೇಷಣೆ ಎಂದೇ ಲೋಹಾರ್ ಹೇಳಿಕೊಂಡಿರುವರು. ಅವರು ಆರಂಭದಲ್ಲಿ ಅಕಡೆಮಿಕ್ ನೆಲೆಯಲ್ಲಿ ಕಲಾಕೃತಿಗಳನ್ನು ಸೃಷ್ಟಿಸುತ್ತಿದ್ದರು. ಕ್ರಮೇಣ ಆಧುನಿಕ ಶೈಲಿಗೆ ವಾಲಿಕೊಂಡಿದ್ದುದು ಸ್ಪಷ್ಟವಾಗುತ್ತದೆ.

ಅವರ ಸಂಯೋಜನೆಗಳಲ್ಲಿ ಕ್ರಿಯಾಶೀಲತೆಯ, ಅಭಿವ್ಯಕ್ತಿಯನ್ನು ಸಂಕೇತಿಸಬಲ್ಲ ವೈಚಾರಿಕ ಅಂಶಗಳೂ ಹುದುಗಿವೆ. ವರ್ಣಗಳ ಮೈಮೇಲೆ ಹರಿದಾಡಿದ ರೇಖೆಗಳ ಹರಿತ, ಆಕಾರಗಳಲ್ಲಿನ ಸೊಗಸುತನ, ಹೂ-ಬಳ್ಳಿಗಳೊಂದಿಗೆ ಮೈಮಾಟಗಳ ಚೆಲುವು, ಚೇತನ, ವರ್ಣಛಾಯೆಗಳ ವೈವಿಧ್ಯತೆ, ಬೆಳಕಿನ ಸ್ಪರ್ಶ, ನಿಸರ್ಗ, ಪಕ್ಷಿಗಳ ಹಾರಾಟ, ಅವುಗಳ ಪುನರಾವರ್ತನೆ, ಗಂಡು ಹೆಣ್ಣುಗಳ ವಿವಿಧ ಭಾವ ಭಂಗಿಗಳ ಚಿತ್ರಣ, ಹಲವು ಕಾಲ್ಪನಿಕ ರೂಪಗಳ ಚಿತ್ರಣ ಎಲ್ಲವೂ ಸ್ವರ್ಗೀಯ ಅನುಭವ ನೀಡುವಂತಹವು. ಲೋಹಾರರು ಮೂಲತಃ ನಿಸರ್ಗದ ಆರಾಧಕರು. ಪ್ರಕೃತಿಯ ಸುಂದರ ಸನ್ನಿವೇಶಗಳನ್ನು ಸಂಜೆ, ಮುಂಜಾವುಗಳನ್ನು, ರಮ್ಯ ದೃಶ್ಯಗಳನ್ನು, ಋತುಗಳ ಸಡಗರ-ಸಂಭ್ರಮಗಳನ್ನು ಕಣ್ಣಿಗೆ ಮುದ ನೀಡುವಂತೆ ಸೆರೆಹಿಡಿದಿರುವುದು ನಿಜಕ್ಕೂ ಅದ್ಭುತವೇ! ಸುತ್ತಲ ಪ್ರಕೃತಿಯಲ್ಲಿನ ಅಸಂಖ್ಯ ಬಣ್ಣಗಳನ್ನವರು ಎಣಿಸಲೆತ್ನಿಸಿರುವರೇನೋ ಎಂಬಂತೆ ವರ್ಣವೈವಿಧ್ಯ ಕಲಾಕೃತಿಗಳಲ್ಲಿವೆ.

ನಿಲ್ಲು ನಿಲ್ಲೆಲೆ ನವಿಲೆ

ನಿನ್ನ ಕಣ್ಣುಗಳೇಸು!

ಕಣ್ಣ ಬಣ್ಣಗಳೇಸು! ಎಣಿಸಲಾರೆ !

ಎಲ್ಲ ರೂಪಿಸಿದವನು ಎಲ್ಲಿ ತಾನಡಗಿದನೆ

ತಾಳಲಾರದು ಜೀವ ಹೇಳಬಾರೆ!

(ಮಧುರಚೆನ್ನ).

ಪ್ರಕೃತಿ ಸೃಷ್ಟಿಯ ಅನಂತ ರೂಪಗಳು, ಚೆಲುವು, ಚೇತನಗಳು, ವರ್ಣವೈವಿಧ್ಯಗಳಿಗೆ

ಬೆರಗಾಗಿ ನಿಂತ ಕವಿಸೃಷ್ಟಿಯಂತೆಯೇ ಈ ಕಲಾವಿದನ ಸೃಷ್ಟಿಯೂ ಆವಿರ್ಭವಿಸಿದೆ. ಅಲ್ಲಿ ಪ್ರಕೃತಿ ಸೌಂದರ್ಯಕ್ಕೆ ಬೆರಗಾದ ಕವಿಯ ಅನುಭವದ ಪಾಕ ಶಾಬ್ದಿಕವಾಗಿ ಹರಿದು ಬಂದು ಮಡುಗಟ್ಟಿದ್ದರೆ, ಇಲ್ಲಿ (ಚಿತ್ರಕಾರನಲ್ಲಿ) ಅದೇ ಬಗೆಯ ಅನುಭವ ದೃಶ್ಯಾತ್ಮಕವಾಗಿ ಪ್ರವಹಿಸಿ ಹರಳುಗೊಂಡಿದೆ. ಭಗವಂತನ ಆನ್ವೇಷಣೆಗೆ ದಾರಿಗಳು ಬೇರೆ ಬೇರೆಯಾದರೂ ಗುರಿ ಒಂದೇ ಆಗಿದೆ.

ಲೋಹಾರರು ಪ್ರಕೃತಿಯಿಂದ ಪ್ರೇರಣೆ ಪಡೆದುಕೊಂಡವರು. ತಮ್ಮ ಅಮೂಲ್ಯ ಕ್ಷಣಗಳನ್ನೆಲ್ಲ ಪ್ರಕೃತಿಯ ಆಸ್ವಾದನೆಯಲ್ಲಿ ತೊಡಗಿಸಿ, ಅನುಭವಿಸಿ ತಮ್ಮೊಳಗಿನ ಸುಪ್ತ ಶಕ್ತಿಯ ಮೂಲಕ ತಾವು ಕಂಡದ್ದನ್ನು ಒಳಗೇ ಮಂಥನ ಮಾಡಿಕೊಂಡು ಹರಳುಗೊಂಡ ಆ ಅನುಭವಗಳನ್ನು ತಮ್ಮದೇ ಮಾಧ್ಯಮದಲ್ಲಿ, ತಾವು ಕಂಡುಕೊಂಡ ಶೈಲಿಯಲ್ಲಿ ಸಮರ್ಥ ರೀತಿಯಲ್ಲಿ ದೃಶ್ಯಾತ್ಮಕಗೊಳಿಸಿರುವರು. ಸರಣಿ ಸರಣಿಯಾಗಿ ರೂಪಿಸಿ ವರ್ಣಗಳನ್ನು ವೈಭವೀಕರಿಸಿರುವರು.

ಪ್ರೇಮ, ಕಾಮಗಳೂ ಪ್ರಕೃತಿ ಜನ್ಯವೇ. ಇವುಗಳ ಕುರಿತಾದ ಅನೇಕ ಕೃತಿಗಳನ್ನು ಲೋಹಾರರು ರಚಿಸಿರುವುದುಂಟು. ತಮ್ಮ ಕಲಾಕೃತಿಗಳ ಮೂಲಕ ಅವುಗಳ ರಹಸ್ಯಗಳನ್ನು ತೆರೆದಿಡುವಲ್ಲಿ ಅವರದು ಸಕಾರಾತ್ಮಕ ಪ್ರತಿಕ್ರಿಯೆ. ಅಂತೆಯೆ ಅಂತಹ ಕೃತಿಗಳಲ್ಲಿನ ಮಾನವ ರೂಪಗಳಲ್ಲಿ ನಗ್ನತೆಯದೇ ವೈಭವೀಕರಣವೆನಿಸಿದ್ದರೂ ಅಶ್ಲೀಲತೆ ತಾಕದೇ ಕಲಾತ್ಮಕ ಗುಣವೇ ಮೇಲ್ಮೆ ಪಡೆದಿರುವುದು ಗಮನಾರ್ಹ. ಪ್ರಕೃತಿಗೂ ನಗ್ನತೆಗೂ ಲೋಹಾರ ಅವರ ಕೃತಿಗಳಲ್ಲಿ ಅಭೇದ ಕಲ್ಪನೆಯಿದೆ. ಪ್ರಕೃತಿಯನ್ನು ನಗ್ನವೆನ್ನಲಾದೀತೆ? ಅಥವಾ ನಗ್ನತೆಯನ್ನು ಮರೆಮಾಚಿ ಪ್ರಕೃತಿ ಸೌಂದರ್ಯವನ್ನು ಸವಿಯಲಾದೀತೇ? ನಗ್ನವೆಂಬುದು ನೈಜತೆ, ನೈಜತೆಯೆಂಬುದು ಸತ್ಯ. ನಗ್ನತೆಗೆ ಮಡಿವಂತಿಕೆ ಅಡ್ಡಿ ಬಂದರೆ ಸತ್ಯವನ್ನು ಮರೆಮಾಚಿದಂತೆಯೇ ಅಲ್ಲವೇ? ನೈಜತೆಯನ್ನು ಪ್ರೀತಿಸಲೇಬೇಕು. ಅದು ಇರುವಂತೆಯೇ ಇರಲು ಬಿಟ್ಟು ಆಸ್ವಾದಿಸಬೇಕು, ಅನುಭವಿಸಬೇಕು. ಆದರೆ ಅಸಂಯಮತೆಯಿಂದ ಅಭಿರುಚಿ ಕೆಟ್ಟ ಸಪ್ಪೆತನವಾಗಬಾರದು ಎಂಬುದು ಲೋಹಾರ್ ಅವರ ಸ್ಪಷ್ಟ ನಂಬಿಕೆ ಅಥವಾ ದೃಷ್ಟಿಕೋನ.

ಲೋಹಾರ ಅವರ ಲೋಕಾನುಭವ ಯಾವ ಬಗೆಯದು, ಸಮಾಜದ ಬಗೆಗಿನ ಅವರ ಸ್ಪಂದನೆ ಎಂತಹುದು ಎಂಬುದನ್ನು ಇನ್ನೂ ಸ್ಪಷ್ಟಪಡಿಸಿಕೊಳ್ಳಲು ಅವರು ರಚಿಸಿರುವ ಹಲವಾರು ವರ್ಣಚಿತ್ರ ಕಲಾಕೃತಿಗಳೇ ನಿದರ್ಶನವಾಗುತ್ತವೆ. ಮಹಿಳೆ ಮತ್ತು ಗಾಳಿಪಟ, ಆಶ್ರಯ, ಪೂಜೆ, ಮಹಿಳೆ ಮತ್ತು ಸ್ವಾತಂತ್ರ್ಯ, ಭಿಕ್ಷುಕರು, ವೃದ್ಧಾಪ್ಯ, ಮಹಿಳೆಯರು, ಕನಸು, ಹಳ್ಳಿಯ ಜೀವನ, ವೇಶ್ಯೆ, ಜೋಡಿ ಜೀವಗಳು, ಕಲಾವಿದರ ಜೀವನ, ಸ್ನಾನಗೃಹ, ಪ್ರೇಮಿಗಳು, ಬಿರುಗಾಳಿ, ಜಲಪ್ರಳಯ, ದುಃಖಿತರು, ಕುಟುಂಬ, ನಿದ್ರೆ, ಬಾಂಬ್‌ಸ್ಫೋಟ, ತುಳಿತಕ್ಕೊಳಗಾದವರು, ಬೆಂಕಿ, ಜಗಳ, ಹರತಾಳ, ಮಹಿಳೆ ಮತ್ತು ಗೆಲುವು, ಗೊಂದಲ, ಮಹಾತ್ಮ ಗಾಂಧಿ, ಸಂಗೀತ, ವೇಗ, ಮತ್ತು ನಿಯಂತ್ರಣ, ಈಜು, ಕತ್ತಲೆಯ ಜೀವನ ಹೀಗೆ ಶೀರ್ಷಿಕೆಗಳನ್ನು ಹೊತ್ತ ಹಲವಾರು ಕಲಾಕೃತಿಗಳಲ್ಲಿ ಕೆಲವು ಅಭಿವ್ಯಕ್ತಿಸಲೇಬೇಕೆಂಬ ಒಳಗಿನ ಒತ್ತಡದಿಂದ ಸರಣಿಯಾಗಿ ರಚನೆಗೊಂಡಿದ್ದರೆ. ಮತ್ತೆ ಕೆಲವು ಸಾಂದರ್ಭಿಕವಾಗಿ (ಕಲಾ ಶಿಬಿರ, ಪ್ರದರ್ಶನ ಇತ್ಯಾದಿಗಳಲ್ಲಿ)

ರಚನೆಗೊಂಡವುಗಳಾಗಿವೆ. ಲೋಹಾರ ಅವರು ಕಲಾಕೃತಿಗಳ ರಚನೆಗೆ ಆಯ್ದುಕೊಳ್ಳುವ ವಿಷಯದ ಆಯ್ಕೆಯಲ್ಲಿನ ವೈವಿಧ್ಯತೆ ಗಮನಸೆಳೆಯುವಂತಹದು. "ಬಹುಮುಖ್ಯವಾಗಿ ಬಡತನ ಮತ್ತು ಶೋಷಣೆಗಳು ನನ್ನ ಕುಂಚಕ್ಕೆ ಸಿಕ್ಕ ಎರಡು ಪ್ರಮುಖ ವಸ್ತುಗಳು. ಇವೇ ನನ್ನ ಹಲವಾರು ಕಲಾಕೃತಿಗಳಿಗೆ ತಳಹದಿಯಾಗಿವೆ." ಎಂದು ಲೋಹಾರ್ ಅವರು ಹೇಳಿಕೊಂಡಿರುವರಾದರೂ ಅವುಗಳ ಪ್ರಖರತೆ ಅಷ್ಟಾಗಿ ಕಂಡುಬರುವುದಿಲ್ಲ. ಬದಲಾಗಿ ಅವರೊಳಗಿನ ಮಾನವ ಸಹಜ ಅವ್ಯಕ್ತ ನೋವು, ದುಗುಡಗಳು, ಸಂಕಟ, ತಳಮಳಗಳು ಅಲ್ಲಲ್ಲಿ ಬಿಂಬಿತವಾಗಿರುವುದು ಅನುಭವಕ್ಕೆ ಬರುತ್ತದೆ. ಸುತ್ತಲಿನ ಪ್ರಕೃತಿಯನ್ನೊಳಗೊಂಡಂತೆ ಮಾನವಾಕಾರಗಳೇ ಲೋಹಾರ್ ಅವರ ಎಲ್ಲ ಸಂಯೋಜನಾ ಕೃತಿಗಳನ್ನು ಆವರಿಸಿಕೊಂಡಿವೆ. ಕ್ವಚಿತ್ತಾಗಿ ಪ್ರಾಣಿಗಳು, ಪಕ್ಷಿಗಳು, ಧಾರ್ಮಿಕ ಸಂಕೇತಗಳು, ಮೊದಲಾದವು ಅವರ ಮುಖ್ಯ ತುಡಿತವನ್ನು ಪುಷ್ಟೀಕರಿಸಲು ಆವಾಹನೆ ಮಾಡಿಕೊಂಡವುಗಳಾಗಿವೆ.

ಒಟ್ಟಾರೆ ಲೋಹಾರ್ ಅವರು ತಮ್ಮ ಬದುಕಿನುದ್ದಕ್ಕೂ ಕಂಡುಂಡ ಸಿಹಿ–ಕಹಿ ಅನುಭವಗಳನ್ನು ತಮ್ಮ ಕೃತಿಗಳ ಮೂಲಕ ಅನುಭಾವಗಳನ್ನಾಗಿಸುವ ಸ್ಥಿತ್ಯಂತರ ಪ್ರಕ್ರಿಯೆಯಲ್ಲಿ ತೊಡಗಿರುವುದು ಸ್ಪಷ್ಟವಾಗಿ ಗೋಚರವಾಗುತ್ತದೆ.

## ಶಿಲ್ಪ ಕಲಾಕೃತಿಗಳು

ಲೋಹಾರರು ಚಿತ್ರಕಲಾ ಸೃಷ್ಟಿಯೊಂದಿಗೆ ಆಗಾಗ ಶಿಲ್ಪಕಲಾಕೃತಿಗಳನ್ನೂ ರಚಿಸಿರುವುದುಂಟು. ಅವೆಲ್ಲ ಸಾಂಪ್ರದಾಯಿಕ ಮತ್ತು ಅಕಡೆಮಿಕ್ ಶೈಲಿಯಲ್ಲಿದ್ದು ಗಮನ ಸೆಳೆಯುತ್ತವೆ. ಆದರೆ ಅವರ ನೈಜ ಭಾವಸಂವಹನ ಈ ಕೃತಿಗಳಲ್ಲಿ ಕಾಣಲಾಗದು. ಕೆಲವು ವ್ಯಕ್ತಿ ಶಿಲ್ಪಗಳು, ದೇವರ ಮೂರ್ತಿಶಿಲ್ಪಗಳನ್ನು ಇವರು ರಚಿಸಿರುವುದುಂಟು. ಸಿಮೆಂಟಿನಲ್ಲಿ ಲಕ್ಷ್ಮಿ, ಕಾಳಿಕಾದೇವಿ, ಬಸವೇಶ್ವರರು ಮೊದಲಾದುವಲ್ಲದೆ ಪ್ಲಾಸ್ಟರ್‌ನಲ್ಲಿ, ಮಣ್ಣಿನಲ್ಲಿ ರಚಿಸಿರುವ ಕೆಲವು ಉಬ್ಬುಶಿಲ್ಪ ಮಾದರಿಗಳನ್ನು ಪರಿಗಣಿಸಬಹುದಾಗಿದೆ. ಇವುಗಳಲ್ಲಿ ಅವರ ಕೌಶಲದ ಸೂಕ್ಷ್ಮಗಳನ್ನು ಗುರುತಿಸಬಹುದು.

## ಪ್ರಶಂಸ ಬರೆಹಗಳು

ವೃತ್ತಿ ಪ್ರವೃತ್ತಿಗಳೆರಡನ್ನೂ ಕಲೆಗಾಗಿಯೇ ಮೀಸಲಿಟ್ಟಿದ್ದ ಲೋಹಾರರು ಜೀವನವನ್ನು ಆನಂದಿಸಿದರು. ತಮ್ಮ ಸಂಕಷ್ಟದ ದಿನಗಳನ್ನು ಕಲಾರಚನೆಯಲ್ಲೇ ತೊಡಗಿಸಿ ಆನಂದದ ಕ್ಷಣಗಳನ್ನಾಗಿ ಮಾರ್ಪಡಿಸಿಕೊಂಡವರು. ತಮ್ಮ ಅಪೂರ್ವ ವ್ಯಕ್ತಿತ್ವ ಮತ್ತು ಕಲಾಕೃತಿಗಳಿಂದ ಕಲಾ ಇತಿಹಾಸದ ಪುಟಗಳನ್ನು ವಿಸ್ತರಿಸಿದವರು. ಅವರು ಇಂದು ಭೌತಿಕವಾಗಿ ಈ ಪ್ರಪಂಚದಿಂದ ತೆರಳಿರಬಹುದು. ಆದರೆ ಅವರ ಚೈತನ್ಯ ಸ್ವರೂಪದ ಕಲಾಕೃತಿಗಳು ನಾಡಿನ ತುಂಬೆಲ್ಲ ಪಸರಿಸಿ ಅವರನ್ನು ಜೀವಂತವಾಗಿರಿಸಿವೆ. ಅವರು ಕಲಾ ಪ್ರಪಂಚದಲ್ಲಿ ಕ್ರಿಯಾಶೀಲರಾಗಿದ್ದಾಗಲೇ ಹಲವು ಮೆಚ್ಚುಗೆ, ಪ್ರಶಂಸೆಗಳು ಸಂದಿರುವುದು ಅವರ ಕಲಾಕೃತಿಗಳ ಸತ್ವ ಮತ್ತು ಸಮ್ಮೋಹಕ ಗುಣಗಳಿಗೆ ಹಿಡಿದ ಕನ್ನಡಿಯಾಗಿವೆ. 'ಹೈದರಾಬಾದ್ ಕರ್ನಾಟಕದ ಕಲಬುರ್ಗಿಯ ಯುವ

ಕಲಾವಿದ ಎಂ.ಬಿ. ಲೋಹಾರ ಅವರು ಚಿತ್ರಕಲೆಯಲ್ಲಿ ಅಪೂರ್ವ ಪ್ರತಿಭಾವಂತರು. ಬಡತನ ಹಾಗೂ ಶೋಷಣೆಗಳು ಅವರ ಕುಂಚಕ್ಕೆ ಸಿಕ್ಕ ಎರಡು ಪ್ರಮುಖ ವಸ್ತುಗಳು. ಅವರ ಹಲವಾರು ಚಿತ್ರಗಳಿಗೆ ಇವೇ ತಳಹದಿಗಳು. ಸಮಾಜದ ಪರಿವರ್ತನೆಗಾಗಿ ಇವರ ಕಲಾಕೃತಿಗಳು ಕ್ರಾಂತಿಯ ಕಹಳೆ ಊದಿದೆ.' ಎಂದು ಒಂದು ಪತ್ರಿಕೆ ಪ್ರಶಂಸಿಸಿದರೆ (ಗ್ರಿನೋಬಲ್ಸ್ ಕನ್ನಡ ದಿನಪತ್ರಿಕೆ–೦೪.೧೧.೧೯೮೩) 'ಎಂ.ಬಿ. ಲೋಹಾರ ಅವರ ಕೃತಿಗಳಲ್ಲಿ ಮಾನವೀಯ ಮೌಲ್ಯಗಳನ್ನು ಸ್ಪಷ್ಟವಾಗಿ ಗುರುತಿಸಬಹುದು. ತಾವು ಯಾವುದೇ ಕೃತಿ ರಚಿಸುವ ಮುನ್ನ ಕೃತಿಯ ವಸ್ತು ವಿಷಯಗಳನ್ನು ಆಲೋಚಿಸಿ, ಮಾಧ್ಯಮಕ್ಕೆ ತಕ್ಕಂತೆ ಸರಿಹೊಂದಿಸಿಕೊಂಡು, ತಮ್ಮದೇ ಶೈಲಿಯಲ್ಲಿ ರಚಿಸುತ್ತಾರೆ'.... ಎಂದು (ಪ್ರಜಾವಾಣಿ ಕನ್ನಡ ದಿನಪತ್ರಿಕೆ–೨.೩.೨೦೦೦)ಮತ್ತೊಂದು ಪತ್ರಿಕೆ ಬಣ್ಣಿಸಿದೆ. ಗ್ರಿನೋಬಲ್ಸ್, ಪ್ರಜಾವಾಣಿಗಳು ಒಳಗೊಂಡಂತೆ ಸಂಜೆವಾಣಿ, ವಿಶ್ವಕಲ್ಯಾಣ, ನಿತ್ಯನೂತನ, ಮೊದಲಾದ ಪತ್ರಿಕೆಗಳು ಇವರ ಕಲೆಯನ್ನು ಪ್ರಶಂಸಿದವುಗಳಲ್ಲಿ ಮುಖ್ಯವಾದುವುಗಳಾಗಿವೆ.

ನಾಲ್ಕು ದಶಕಗಳ ಕಾಲ ನಿರಂತರವಾಗಿ ಕಲಾಕೃತಿಗಳನ್ನು ಸೃಷ್ಟಿಸುತ್ತ ಬಂದ ಲೋಹಾರರು ಆಗಾಗ ಏಕವ್ಯಕ್ತಿ ಹಾಗೂ ಸಮೂಹ ಕಲಾಪ್ರದರ್ಶನಗಳನ್ನು ದೇಶದ ವಿವಿಧೆಡೆಗಳಲ್ಲಿ ಏರ್ಪಡಿಸಿರುವರು. ಮತ್ತು ಸಾಕಷ್ಟು ಪ್ರಶಂಸೆ, ಪ್ರಶಸ್ತಿ, ಪುರಸ್ಕಾರಗಳನ್ನು ಹೊಂದಿರುವರೆಂದು ಬೇರೆ ಹೇಳಬೇಕಿಲ್ಲ. ಲೋಹಾರರು ಸೇವೆ ಸಲ್ಲಿಸಿದ ದಿ ಐಡಿಯಲ್ ಫೈನ್ ಆರ್ಟ್ ಸಂಸ್ಥೆ ಹಾಗೂ ಅದರ ಕಾರ್ಯದರ್ಶಿಗಳಾಗಿರುವ ಪ್ರೊ. ವಿ.ಜಿ. ಅಂದಾನಿ ಮತ್ತು ಕಲಾವಿದರ ಬಳಗ ದಿನಾಂಕ ೦೬.೦೩.೨೦೦೭ ರಂದು ಈ ಕಲಾವಿದನನ್ನು ಹೃತ್ಪೂರ್ವಕವಾಗಿ ಅಭಿನಂದಿಸಿದಾಗ ಅವರನ್ನು ಹೀಗೆ ಬಣ್ಣಿಸಿದೆ. "ಆಕರ್ಷಕ ಐತಿಹಾಸಿಕ ಹಿನ್ನೆಲೆಯ ಈ ವಿಶಿಷ್ಟ ಭೂದೃಶ್ಯಗಳ ಬೀದರ ಜಿಲ್ಲೆಯಲ್ಲಿ ಜನಿಸಿದ ಶ್ರೀ ಎಂ.ಬಿ. ಲೋಹಾರ ತಮ್ಮ ಸುತ್ತಲಿನ ಬದುಕಿನ ಹಲವು ಮುಖಗಳನ್ನು ಗ್ರಹಿಸಿದವರು. ಈ ಗ್ರಹಿಕೆಯ ಆಳ ಹರವುಗಳು ಅವರ ಅಭಿವ್ಯಕ್ತಿಯಲ್ಲಿ ಸಾಕಷ್ಟು ಪ್ರಭಾವಶಾಲಿಯಾಗಿಯೇ ಕಾಣಿಸಿಕೊಂಡಿವೆ. ೧೯೭೧ ರಲ್ಲಿ ಗುಲಬರ್ಗಾದ ದಿ ಐಡಿಯಲ್ ಫೈನ್ ಆರ್ಟ್ ಇನ್‌ಸ್ಟಿಟ್ಯೂಟ್‌ನಲ್ಲಿ ಡ್ರಾಯಿಂಗ್ ಮತ್ತು ಪೇಂಟಿಂಗ್‌ನಲ್ಲಿ ಡಿಪ್ಲೊಮಾ ಪಡೆದಿರುವ ಇವರು ರಾಜ್ಯ ಹಾಗೂ ರಾಷ್ಟ್ರಮಟ್ಟದ ಹಲವಾರು ಕಲಾಕೇಂದ್ರಗಳಲ್ಲಿ ತಮ್ಮ ಕಲಾಕೃತಿಗಳನ್ನು ಪ್ರದರ್ಶಿಸಿದ್ದಾರೆ. ರಾಜ್ಯ ಹಾಗೂ ಕೇಂದ್ರ ಲಲಿತಕಲಾ ಅಕಾಡೆಮಿಯ ಕಲಾ ಪ್ರದರ್ಶನಗಳಲ್ಲೂ ಭಾಗವಹಿಸಿದ್ದಾರೆ. ೧೯೯೩ರಲ್ಲಿ ಗುಲಬರ್ಗಾದಲ್ಲಿ ನಡೆದ ಅಂತರರಾಷ್ಟ್ರೀಯ ಶಿಲ್ಪ ಮತ್ತು ಚಿತ್ರಕಲಾವಿದರ ಸಿಂಪೋಸಿಯಮ್‌ನಲ್ಲೂ ಭಾಗವಹಿಸಿ ಸಂಜೆ ಮುಂಜಾವುಗಳನ್ನು ವರ್ಣಮಯ ದೃಶ್ಯಗಳನ್ನು, ಗಿಡಮರಗಳ ಆಕಾರ, ಸಂವತ್ಸರದ ಸಡಗರಗಳನ್ನು ಸುಂದರವಾಗಿ ಚಿತ್ರಿಸಿದ್ದಾರೆ. ಭಾವಚಿತ್ರಗಳಲ್ಲಿ ಅಪರೂಪವಾದ ಚೆಲುವನ್ನು ಹಾಗೂ ಮುಖದ ಭಾವನೆ, ಲಕ್ಷಣಗಳನ್ನು ಸೆರೆಹಿಡಿದಿರುವ ಇವರ ಕಲಾರಾಧನೆಯ ಗುಣ ಕಣ್ಣಿಗೆ ಕಟ್ಟುವ ಹಾಗೆ ಮನಕ್ಕೆ ಮುಟ್ಟುವ ರೀತಿಯಲ್ಲಿ ಅನೇಕ ಭಾವಚಿತ್ರಗಳನ್ನು ರಚಿಸಿದ್ದಾರೆ. ಭಾವಚಿತ್ರಗಳಿಗೆ ಶೋಭೆ ತರುವ ಹಾಗೆ ಸುತ್ತಲಿನ ಹಿನ್ನೆಲೆ ಶ್ರೀಮಂತಗೊಳಿಸಲು ಆಕಾರಗಳಿಂದ

ಸಂಭಾಷಿಸುವ ಗುಣ ಹೊಂದಿವೆ. ವೀಕ್ಷಕರ ಮನಸ್ಸಿಗೆ ವರ್ಣಗಳು ಮೃದುವಾದ ಅಲೆಗಳಿಂದ ಅನಂತತೆಗೆ ಕರೆದೊಯ್ಯುತ್ತವೆ. ಹೊಸ ಸ್ಪರ್ಶ, ಆಯಾಮಗಳಿಂದ ಭಾವಚಿತ್ರಗಳು ಸಹಜತೆಯಿಂದ ಮೌನರಾಗ ಹರಿಸುತ್ತವೆ. ಅವರ ಸಂಯೋಜನೆಗಳಲ್ಲಿ ಕ್ರಿಯಾಶೀಲತೆಯ ಅಭಿವ್ಯಕ್ತಿಯನ್ನು ಸಂಕೇತಿಸಬಲ್ಲ ವೈಚಾರಿಕತೆಯ ಅಂಶಗಳು, ವರ್ಣಗಳಲ್ಲಿನ ರೇಖೆಗಳ ಹರಿತ, ಆಕಾರಗಳಲ್ಲಿನ ಸೊಗಡುತನ ಬಳ್ಳಿ–ಹೂಗಳೊಂದಿಗೆ ಮೈಮಾಟರೂಪುಗೊಳ್ಳುವುದು, ವರ್ಣಗಳ ವೈವಿಧ್ಯ, ಬೆಳಕಿನ ತೀವ್ರತೆ, ನಿಸರ್ಗ, ಪಕ್ಷಿಗಳ ಹಾರಾಟ, ಹೆಣ್ಣು–ಗಂಡಿನ ಆಕಾರಗಳ ಕಾಲ್ಪನಿಕತೆ, ಶಕ್ತಿ, ಭಾವನೆಗಳಿಗೆ ಸ್ಪಂದಿಸುವ ಗುಣ ಹೊಂದಿರುತ್ತವೆ. ತೈಲವರ್ಣ, ಜಲವರ್ಣ, ಆಕ್ರಿಲಿಕ್ ವರ್ಣಗಳಲ್ಲಿ ಪ್ರಯೋಗಶೀಲರಾಗಿ ಕೃತಿ ರಚಿಸಿದ್ದಾರೆ. ಬದುಕಿನ ವಿಷಯಗಳಿಗೆ ತಮ್ಮ ವಿಚಾರಗಳನ್ನು ಹೊಂದಿಸಿ ಕೃತಿಗಳ ಮೂಲಕ (ಮನಸ್ಸನ್ನು) ತೆರೆದಿಡುತ್ತಾರೆ. ದೃಶ್ಯಗಳಲ್ಲಿ ನೈಜತೆಯ ಜೊತೆಗೆ ವಿಚಾರವಂತಿಕೆ, ವಿಶಾಲವಾದ ಅರ್ಥಕೊಡುತ್ತ ಕಲಾಕೃತಿಗಳಲ್ಲಿ ಅನನ್ಯತೆಯ ಸಂದರ್ಭಗಳನ್ನು ಸೃಷ್ಟಿಸಿದ್ದಾರೆ.

ಪ್ರಾರಂಭದ ಪ್ರಕೃತಿ ಚಿತ್ರಗಳಲ್ಲಿ ಅಭಿವ್ಯಕ್ತಿ, ವೈವಿಧ್ಯತೆಯಿಂದ ಕೂಡಿದ ಕಲಾಕೃತಿಗಳು ಲೋಹಾರ ಅವರ ಕಲಾ ಸಂವೇದನೆಯ ತೀವ್ರತೆಗೆ ಉದಾಹರಣೆಗಳಂತಿವೆ. ಹೆಣ್ಣು–ಗಂಡುಗಳ ಮಾನವೀಯ ಸಂಬಂಧಗಳ ಹಲವು ಒಳನೋಟಗಳನ್ನು ತೈಲವರ್ಣದ ಕೃತಿಗಳಲ್ಲಿ ನಾಟಕೀಯವಾಗಿ ಬಿಂಬಿಸುವಂತೆಯೇ ಸೂಕ್ಷ್ಮತೆಯನ್ನು ಅರಗಿಸಿಕೊಂಡಿವೆ. ಕುಂಚದ ಬೀಸುಗಳ ಆವೇಶದಲ್ಲಿ ಆಕರ್ಷಕವಾಗಿ ಅಲಂಕೃತಗೊಂಡ ಬಣ್ಣಗಳ ಆಳದಲ್ಲಿ ಹಲವು ಭಾವಗಳು ವೈಭವೀಕರಣಗೊಂಡು ನೋಡುಗನನ್ನು ಆವರಿಸಿಬಿಡುತ್ತವೆ. ಅವರ ಕಪಲ್ ಶೀರ್ಷಿಕೆಯ ಕೃತಿಗಳನ್ನು ಇಲ್ಲಿ ಉಲ್ಲೇಖಿಸಬಹುದು. ವಸ್ತು, ಆಶಯ ಹಾಗೂ ಮಾಧ್ಯಮದ ನಿರ್ವಹಣೆಗಳಲ್ಲಿ ಗಣನೀಯ ಸಾಧ್ಯತೆಗಳನ್ನು ಸಾಧಿಸಿರುವ ಲೋಹಾರ ಅವರು ಹಲವಾರು ಪ್ರಶಸ್ತಿ ಪುರಸ್ಕಾರಗಳಿಗೂ ಪಾತ್ರರಾಗಿರುವರು. ಅವುಗಳಲ್ಲಿ ಪ್ರಮುಖವಾದುದು ಹೈದ್ರಾಬಾದಿನ ೪೭ನೇ ಅಖಿಲ ಭಾರತ ಕಲಾಪ್ರದರ್ಶನ, ಕರ್ನಾಟಕ ಲಲಿತಕಲಾ ಅಕಾಡೆಮಿಯ ವಾರ್ಷಿಕ ಬಹುಮಾನ, ಮೈಸೂರು ದಸರಾ ಕಲಾಪ್ರದರ್ಶನ, ಗುಲಬರ್ಗಾ ವಿಶ್ವವಿದ್ಯಾಲಯದ ಪುರಸ್ಕಾರ, ಬೈನಾಲೆ ಗೌರವ ಹಾಗೂ ನವದೆಹಲಿಯ ಕೇಂದ್ರ ಲಲಿತಕಲಾ ಅಕಾಡೆಮಿಯ ೪೦ನೇ ರಾಷ್ಟ್ರೀಯ ಕಲಾ ಪ್ರದರ್ಶನದ ಪುರಸ್ಕಾರ ಇತ್ಯಾದಿಗಳು. ರಾಷ್ಟ್ರದ ಪ್ರಮುಖ ಕಲಾ ಕೇಂದ್ರಗಳಾದ ನವದೆಹಲಿಯ ಆಧುನಿಕ ಕಲಾ ಗ್ಯಾಲರಿ, ಬೆಂಗಳೂರಿನ ಕರ್ನಾಟಕ ಲಲಿತಕಲಾ ಅಕಾಡೆಮಿ, ಹೈದ್ರಾಬಾದ್ ಆರ್ಟ್ ಸೊಸೈಟಿ, ಕೇಂದ್ರ ಲಲಿತಕಲಾ ಅಕಾಡೆಮಿಗಳಲ್ಲಿ ಇವರ ಕಲಾಕೃತಿಗಳು ಸಂಗ್ರಹಿಸಲ್ಪಟ್ಟಿವೆ. ಕಲಾ ಸೃಷ್ಟಿಯಲ್ಲದೆ ಲೋಹಾರ ಅವರು ಕಲಾ ಶಿಕ್ಷಣಕ್ಕೂ ಗಣನೀಯ ಸೇವೆ ಸಲ್ಲಿಸಿದ್ದಾರೆ. ಇವರು ಈಗ ಪ್ರಸ್ತುತ ಗುಲಬರ್ಗಾದ ದಿ ಐಡಿಯಲ್ ಫೈನ್ ಆರ್ಟ್ ಇನ್‌ಸ್ಟಿಟ್ಯೂಟ್‌ನಲ್ಲಿ ಉಪನ್ಯಾಸಕರಾಗಿ, ಪ್ರಾಚಾರ್ಯರಾಗಿ ಅಂದಾನಿಯವರ ಜೊತೆಗೂಡಿ ಆತ್ಮೀಯತೆಯೊಂದಿಗೆ ನಿರಂತರವಾಗಿ ಕಾರ್ಯನಿರ್ವಹಿಸಿದ್ದಾರೆ. ಶಿಕ್ಷಣದಲ್ಲಿಯೂ ಕೂಡಾ ವಿದ್ಯಾರ್ಥಿಗಳೊಂದಿಗೆ ಕಲಾ ಚರ್ಚೆ, ಆತ್ಮೀಯತೆ, ಕಾಳಜಿಯಿಂದ, ಚಿತ್ರಕಲೆಯ ವ್ಯಾಖ್ಯಾನ

